ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೫೦ ಫೆಬ್ರವರಿ ೨೦೧೪ ಸಂಚಿಕೆ : ೦೨



ವೈಭವದ ಬೆಳ್ಳಿಪಾಲಕಿ ಉತ್ಸವ

ಶ್ರೀಕ್ಷೇತ್ರದ ಆರಾಧ್ಯದೈವ
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ರಥೋತ್ಸವ

ತುಮಕೂರು ನಗರದಲ್ಲಿ ನೂತನವಾಗಿ ನಿರ್ಮಿಸಿರುವ
ಅತ್ಯಾಧುನಿಕ ಸೌಕರ್ಯಗಳನ್ನೊಳಗೊಂಡ ವಸತಿಗೃಹ

ಹೋಟೆಲ್ ಶ್ರೀ ವಿಘ್ನೇಶ್ವರ ಕಂಫರ್ಟ್

ಸರ್ಕಾರಿ ಕಾಲೇಜು ಮುಂಭಾಗ, ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ : 2255883, 2257770, 2257774, 2257772 ಫ್ಯಾಕ್ಸ್ : 2255873



- ಮೂರು ವಿವಿಧ ದರ್ಜೆಯ 50 ಸುಸಜ್ಜಿತ ಕೊಠಡಿಗಳು
- ವಿಶೇಷ ವ್ಯವಸ್ಥೆಯ ಹವಾನಿಯಂತ್ರಿತ ಕೊಠಡಿಗಳು
- ಹವಾನಿಯಂತ್ರಿತ ಮಿನಿ ಕಾನ್ಫರೆನ್ಸ್ ಹಾಲ್
- ವಿಶಾಲವಾದ ಪಾರ್ಕಿಂಗ್ ವ್ಯವಸ್ಥೆ
- ಪ್ರತಿ ಕೊಠಡಿಗೆ ಟಿ.ವಿ., ಟೆಲಿಫೋನ್ ಸಂಪರ್ಕ
- ಹವಾನಿಯಂತ್ರಿತ ವಿ.ಐ.ಪಿ. ರೂಂ.
- ಶಾಶ್ವತ ವಿದ್ಯುತ್ ವ್ಯವಸ್ಥೆ
- ಪರಿಣಿತ ಸಿಬ್ಬಂದಿಯ ವಿನೀತ ಸೇವೆ

ಲಿಫ್ಟ್ ಸೌಲಭ್ಯವಿದೆ

ಹವಾನಿಯಂತ್ರಿತ ಉಪಹಾರ ಗೃಹ

ಮಾಲೀಕರು : ಎಸ್.ಜಿ. ಚಂದ್ರಮೌಳಿ, ಗ್ರಾನೈಟ್ ಉದ್ಯಮಿ


 ಅಂತರಂಗ 



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ


ಸಂಪುಟ : ೫೦ ಫೆಬ್ರವರಿ ೨೦೧೮ ಸಂಚಿಕೆ : ೦೨



ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕ:
ಹೆಚ್.ಬಿ. ಗಂಗಾಧರಯ್ಯ

ವಿತರಣೆ :
ಆರ್.ಎಸ್. ಮಲ್ಲೇಶಪ್ಪ

**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ**
**ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


## ಒಳಪುಟಗಳಲ್ಲಿ .....................



ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ


**ಚಂದಾ ವಿವರ : ವಾರ್ಷಿಕ ಚಂದಾ ರೂ. 200/–**
**ಆಜೀವ ಸದಸ್ಯತ್ವ ರೂ. 1500/– ಬಿಡಿ ಪ್ರತಿ ರೂ. 12.00**

ಸಂ
ಪಾ
ದ
ಕೀ
ಯ

**ಜಾತ್ರೆ**ಗಳು ಭಾವೈಕ್ಯತೆಯ ಸಮಾವೇಶಗಳು. ಭಕ್ತಿ ಉತ್ಸಾಹಗಳ ಅನೌಪಚಾರಿಕ ಸಮಾರಂಭಗಳು. ಜೀವನೋತ್ಸಾಹದ ಸಮ್ಮೇಳನಗಳು. ಆಸ್ತಿಕ ಭಾವದ ಭಾವಾಲಯಗಳು. ಶ್ರೀಮಠದ ಶಿವರಾತ್ರಿ ಸಂದರ್ಭದ ಜಾತ್ರೆಗೆ ಈ ಬಾರಿ ಮತ್ತೊಂದು ವಿಶೇಷವೂ ಸಮ್ಮಿಳಿತಗೊಂಡಿದೆ. **ದಿನಾಂಕ 20-02-2014ರ ಫೆಬ್ರವರಿ ಗುರುವಾರದಂದು** ಶ್ರೀಮಠದ ಕಾರಣಿಕ ಪುರುಷ ಪುಣ್ಯಮೂರ್ತಿ **ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ೧೦೭ನೆಯ ಜನ್ಮದಿನೋತ್ಸವ ಹಾಗೂ ಗುರುವಂದನಾ ಸಮಾರಂಭ** ಆಯೋಜಿತಗೊಂಡಿದೆ. **ದಿನಾಂಕ 19-02-2014**ರಿಂದ ಸುಪ್ರಸಿದ್ಧ **ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನವೂ** ಪ್ರಾರಂಭವಾಗುತ್ತಿದೆ.

ಪರಮಪೂಜ್ಯ ಶ್ರೀ ಶ್ರೀಗಳವರು **106** ಸಂವತ್ಸರಗಳನ್ನು ಕ್ರಮಿಸಿ ಮುನ್ನಡೆದಿದ್ದಾರೆ. ಕ್ಷಣ ಕ್ಷಣಾರ್ಧವನ್ನೂ ಲೋಕಕಲ್ಯಾಣಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ. ಪೂಜ್ಯರು 'ವಿಸ್ಮಯ'ರಾಗಿದ್ದಾರೆ. ಈಗಲೂ ಯಾರ ಸಹಾಯವೂ ಇಲ್ಲದೆ ನಡೆದಾಡುತ್ತಾರೆ. ಕನ್ನಡಕವಿಲ್ಲದೆ ಓದುತ್ತಾರೆ. ನೆನಪಿನ ಶಕ್ತಿ ದಟ್ಟವಾಗಿದೆ. ದೈನಂದಿನ ಯಾವ ಸೇವೆಯನ್ನೂ ನಿಲ್ಲಿಸಿಲ್ಲ. ಪ್ರತಿನಿತ್ಯದ ಹತ್ತು ಸಾವಿರ ವಿದ್ಯಾರ್ಥಿಗಳ ಸಾಮೂಹಿಕ ಪ್ರಾರ್ಥನೆಯನ್ನು ತಪಸ್ಸಿನಂತೆ ನಡೆಸುತ್ತಿದ್ದಾರೆ. ಇಂದೂ ಭಕ್ತಾದಿಗಳ ಕರೆಯ ಮೇರೆಗೆ ನೂರಾರು ಕಿ.ಮೀ ಹೋಗಿ ಬರುತ್ತಾರೆ. ಸಭೆ ಸಮಾರಂಭಗಳಲ್ಲಿ ಭಾಗವಹಿಸುತ್ತಾರೆ. ಹೊಲಗದ್ದೆಗಳಿಗೆ ಹೋಗಿ ಬರುತ್ತಾರೆ. ಬೆಳಗಿನಿಂದ ರಾತ್ರಿ ಹನ್ನೊಂದು ಘಂಟೆಯವರೆಗೂ ಬರುವ ಭಕ್ತಾದಿಗಳಿಗೆ ಬೇಸರ ಪಡದೆ ದರ್ಶನ ನೀಡುತ್ತಾರೆ. **'ಪ್ರಸಾದ ಮಾಡಿಕೊಂಡು ಬನ್ನಿ, ಇಂದು ಇಲ್ಲೇ ಉಳಿಯುತ್ತೀರಾ, ರೂಂ ತೆಗೆದುಕೊಂಡಿದ್ದೀರಾ'**- ಎಂದೆಲ್ಲಾ ಕೇಳುತ್ತಾರೆ. ಶ್ರೀಮಠದ ಅಧ್ಯಕ್ಷರಾಗಿ ಮುನ್ನಡೆಯುತ್ತಿರುವ **ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳ** ಸೇವಾಕಾರ್ಯಗಳನ್ನು ಗಮನಿಸುತ್ತಾರೆ, ಸಮಾಲೋಚನೆ ಮಾಡುತ್ತಾರೆ. ತಮ್ಮನ್ನು ಕಾಣಲು ಬಂದ ಗಣ್ಯರೊಂದಿಗೆ, ಜನಸಾಮಾನ್ಯರೊಂದಿಗೆ, ಶ್ರೀಮಠದ ಆಡಳಿತ ಸಿಬ್ಬಂದಿಯೊಂದಿಗೆ, ವಿದ್ಯಾಸಂಸ್ಥೆಗಳ ಸಿಬ್ಬಂದಿಗಳೊಂದಿಗೆ ಸಮಸ್ಯೆಗಳನ್ನು ತಿಳಿದುಕೊಳ್ಳುತ್ತಾರೆ, ಸೂಕ್ತ ಸಲಹೆ ಕೊಡುತ್ತಾರೆ. ನಾಟಕ ಯೋಜನೆಯನ್ನು ಆಸಕ್ತಿಯನ್ನು ಮುಂದುವರೆಸಿದ್ದಾರೆ. ಇಂದೂ ಗ್ರಂಥಾವಲೋಕನವನ್ನು ಬಿಟ್ಟಿಲ್ಲ. ತಮ್ಮ ಗುರುಪೂಜ್ಯರ ಸ್ಮರಣೆಯನ್ನು ಮರೆತಿಲ್ಲ, ಯಾವ ಜನ್ಮದ ಪುಣ್ಯವೋ ನಮ್ಮೆಲ್ಲರನ್ನು ಕೈಹಿಡಿದು ಕರುಣಾಳು ಬೆಳಕಾಗಿ ಆಶೀರ್ವದಿಸುತ್ತಿದ್ದಾರೆ. 'ಸಿದ್ಧಗಂಗಾ' ಮಾಸಪತ್ರಿಕೆಯಂತೂ ತನ್ನ ಸುವರ್ಣಮಹೋತ್ಸವದತ್ತ ಶ್ರೀಗಳವರ ಕೃಪಾಶೀರ್ವಾದದಲ್ಲಿ ಮುನ್ನಡೆಯುತ್ತಿದೆ.

*-ಸಂಪಾದಕ*







ಶ್ರೀ
ವಾ
ಣಿ

# 'ಕುಡುವವಂ ಸಂಗಂ ಬೇಡುವವಂ ಸಂಗಮ ದೇವನೆನಗೊಂದು ಭಾವವಿಲ್ಲ'

*ಭೀಕರ ಬರಗಾಲದಿಂದ 1966ರಲ್ಲಿ ರಾಜ್ಯ ಕಂಗೆಟ್ಟು ಹೋದ ಸಂದರ್ಭ. ಶ್ರೀಮಠದ ದಾಸೋಹ ಸೇವೆಯನ್ನು ನಡೆಸಿಕೊಂಡು ಹೋಗುವುದರ ಜೊತೆಗೆ ಗ್ರಾಮಾಂತರಗಳಿಂದ ಬರುತ್ತಿದ್ದ ಬಡವರಿಗೆ ದಾಸೋಹವನ್ನು ಮಾಡಲೇಬೇಕಾದ ಪರಿಸ್ಥಿತಿ. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಆಗಮಿಸುತ್ತಿದ್ದ ಆ ಗ್ರಾಮ ಬಂಧು ಭಗಿನಿಯರ 'ಹೊಟ್ಟೆ ಬರಿದೋ ಬರಿದು' ತತ್ತರಿಸುತ್ತ ಬರುತ್ತಿದ್ದ ಆ ದೃಶ್ಯ ಮರೆಯಲಾಗದ್ದು. ಅವರೆಲ್ಲರಿಗೆ ಮಠದ ಮುಂದೆಯೇ ಅವರು ತಂದ ಪಾತ್ರೆ ಪರಡಿಗಳಿಗೆ ಪ್ರಸಾದವನ್ನು ನೀಡುತ್ತಿರಲಾಗುತ್ತಿತ್ತು. ಸೊಯಾಬೀನ್ ಕಾಳನ್ನು ಬೇಯಿಸಿ ಸಾಲುಸಾಲಾಗಿ ನಿಲ್ಲುತ್ತಿದ್ದ ಆ ಬಂಧುಗಳಿಗೆ ಬೊಗಸೆ ತುಂಬಾ ಹಾಕುತ್ತಿದ್ದೆವು. ಇದು ಸುಮಾರು ತಿಂಗಳುಗಳವರೆಗೆ ನಡೆದು ಬಂದಿತು. ತುಮಕೂರು ನಗರದ ಪ್ರಮುಖರು ಹತ್ತಾರು ಮಂದಿ ಶ್ರೀಮಠಕ್ಕೆ ಬಂದು ನೋಡಿದರು. ಒಮ್ಮೆ ಪ್ರಸಾದ ವಿತರಣೆಯ ನಂತರ ನಮ್ಮ ಕಾರ್ಯಾಲಯಕ್ಕೆ ಬಂದರು. 'ಬುದ್ದೀ ತಮ್ಮಲ್ಲಿ ಅರಿಕೆ ಮಾಡಿಕೊಳ್ಳುತ್ತಿದ್ದೇವೆ. ದಯವಿಟ್ಟು ಈ ಜನಸಮೂಹಕ್ಕೆ ಮಾಡುವ ದಾಸೋಹ ಸೇವೆಯನ್ನು ನಿಲ್ಲಿಸುವ ಯೋಚನೆ ಮಾಡಿ. ಮಕ್ಕಳಿಗೆ ಮಾಡುತ್ತಿರುವ ಸೇವೆಯನ್ನು ಮುಂದುವರೆಸಿ' ಎಂದರು. ಹತ್ತು ನಿಮಿಷ ಸುಮ್ಮನೆ ಕುಳಿತೆವು. ಅವರು ಮತ್ತೆ ಕೇಳಿದರು ತಾವೇನೂ ಹೇಳಲಿಲ್ಲ ಎಂದು. ನಾವು ಉತ್ತರಿಸಲೇ ಬೇಕಾಯಿತು. ನೀವು ಹೇಳುತ್ತಿರುವುದು ಸರಿಯೇ? ಆದರೆ ದಾಸೋಹವನ್ನು ನಿಲ್ಲಿಸುವುದಕ್ಕೇಕೆ ಯೋಚಿಸಬೇಕು? ನಡೆಸುವುದಕ್ಕೆ ಯೋಚಿಸಬೇಕಲ್ಲವೆ?' ಎಂದೆವು. ಆ ಪ್ರಮುಖರೆಲ್ಲ ಮರು ಮಾತಾಡದೆ ಎದ್ದು ಹೋದರು. ನಾವೆಂದೂ ಶ್ರೀಮಠದ ಕೈಂಕರ್ಯವನ್ನು 'ನಾವು' ಮಾಡುತ್ತಿದ್ದೇವೆ ಎಂದು ಅಂದುಕೊಂಡಿಲ್ಲ. **'ಕುಡುವವಂ ಸಂಗಂ ಬೇಡುವವಂ ಸಂಗಮದೇವನೆನಗೊಂದು ಭಾವವಿಲ್ಲ'** ಎಂದು ನಂಬಿ ನಡೆದಿದ್ದೇವೆ.*

☆

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

*ಪಂಚಶಕ್ತಿಯನು ಪಂಚ ಸಾದಾಖ್ಯವನು ಪಂಚಕಲೆಗಳನು*
*ಪಂಚಾಕ್ಷರಂಗಳನು, ಪಂಚ ಭೂತಾತ್ಮವನು*
*ತನ್ನಲ್ಲಿ ಗರ್ಭೀಕರಿಸಿಕೊಂಡು ತಾನು ಚಿದ್ಬ್ರಹ್ಮಾಂಡತ್ಮಕನಾಗಿ*
*ಚಿನ್ಮಯನಾಗಿ ಚಿದ್ರೂಪಕನಾಗಿ ಚಿತ್ಪ್ರಕಾಶಕನಾಗಿ*
*ಚಿದಾನಂದನಾಗಿ*
*ಸುಖ ದುಃಖ ಭಯ ಮೋಹಂಗಳ ಹೊದ್ದದೆ*
*ಸರ್ವವ್ಯಾಪಕನಾಗಿ ಸರ್ವಚೈತನ್ಯಮಯನಾಗಿಪ್ಪ*
*ಪರಂ ಜ್ಯೋತಿರ್ಲಿಂಗವು ಎನ್ನ ಪ್ರಾಣಲಿಂಗವಯ್ಯಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ*

ಐದು ಶಕ್ತಿಯನು ಐದು ಸಾದಾಖ್ಯವನು ('ಸಾದಾಖ್ಯ' ಎಂಬ ಪದವು 'ಸತ್'(ನಿಜವಾದ) 'ಆಖ್ಯ'(ಮುಖ) ಎಂಬ ಪದಗಳಿಂದ ಕೂಡಿ ಆದುದು), ಐದು ಕಲೆಗಳನು (ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ(ಕ್ರಿಯಾಶಕ್ತಿ) ಐದು ಅಕ್ಷರಗಳನು, ಐದು ಭೂತಗಳನು (ಪೃಥ್ವಿ, ಅಪ್, ಹಗ್ನಿ, ವಾಯು, ಆಕಾಶ) ತನ್ನಲ್ಲಿ ಕವಳೀಕರಿಸಿಕೊಂಡು ಶರಣನು ಜ್ಞಾನ ಬ್ರಹ್ಮಾಂಡ ಸ್ವರೂಪನಾಗಿ, ದಿಗ್ದೆಶೆಯನೊಳಕೊಂಡು ಬೆಳಗಲ್ಪಟ್ಟಾತನಾಗಿ, ಜ್ಞಾನಸ್ವರೂಪನಾಗಿ, ಜ್ಞಾನದಿಂದ ಬೆಳಗಲ್ಪಟ್ಟಾತನಾಗಿ, ಜ್ಞಾನದಲ್ಲಿ ಸಂತೋಷಸ್ವರೂಪನಾಗಿ, ಸುಖ ಒಂದು ಕೋಟಾನುಕೋಟಿ ದುಃಖ ಒಂದು ಕೋಟಾನು ಕೋಟಿಯ ಭೀತಿಯ ಮಮಕಾರಂಗಳ ಸೋಂಕದೆ ಸಮಸ್ತದಲ್ಲಿ ವ್ಯಾಪಿಸಿಕೊಂಡಿರುತ್ತಿಹನಾಗಿ, ಸಮಸ್ತಕ್ಕೂ ಚೇತನಸ್ವರೂಪನಾಗಿರುವ ಸ್ವಯಂ ಜ್ಯೋತಿ ಸ್ವರೂಪವಾದ ಎನ್ನ ಪ್ರಾಣಲಿಂಗವಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು– ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

'ಕಾಯವಿಡಿದು ಕರ್ಮವಿರಹಿತನಾಗಿರುವ'
ಕಾಯಕದಳಿಯ ಬೆರಗ ತೋರಿಸುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ।

ತನುವ ಮಹಾವಾಗಿಸಿದ ಮನವ ಘನವಾಗಿಸಿದ
ಭಾವ ನಿರ್ಭಾವವ ಮಾಡಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತನುವಿನೊಳಗಿದ್ದು ತನುವ ಗೆದ್ದಿರುವಂಥ
ಮನದೊಳಗಿದ್ದು ಮನವನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತನು ಶುದ್ಧವಾಯಿತು ನಿಮ್ಮದರುಶನದಿಂದ
ಮನಶುದ್ಧವಾಯಿತು ನೆನಹಿಂದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತನುವೆ ದೇವಾಲಯ ಮನವೆ ಮಹಾಲಿಂಗ
ಮಾತೇ ಮಂತ್ರವಾಗಿ ಅರಳಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಗಕೆ ಬೆರಗಾಗಿರುವೆ ಜಗವ ನೀ ಪೊರೆದಿರುವೆ
ಜಗದೊಳಗಿದ್ದು ಜಗವ ಗೆದ್ದಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತುಪ್ಪ ತಿಳಿಯಾದರೂ ಗಟ್ಟಿಯಾದರೂ ತಾನು
ತುಪ್ಪವೇ ಆದಂತೆ ನಗುತಿರುವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವಶುದ್ಧಿಯ ಕಲಿಸಿ ಬಾಳ ಹಸ ಮಾಡಿದೆ
ಜೀವಭಾವವ ಬಿಡಿಸಿ ನಡೆ ಕಲಿಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿದ್ದೆಗೆ ಸವಿಮದ್ದ ತೋರಿದ ಶ್ರೀಗುರುವೆ
ದೇಹಮನ ದುಡಿಮೆಗೆ ತೊಡಗಿಸಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಠವ 'ಮಹಾಮನೆ'ಯಾಗಿಸಿ ಭಕ್ತಿಸಿರಿಯನೆಬೆಳೆದು
ದಿಟದ ದಾರಿಯ ತೆರೆದು ತೋರಿಸಿದ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಪ್ರಾರ್ಥನಾಯೋಗದ ನಿಯಮಗಳೂ

–ಶ್ರೀ ಕುಮಾರಸ್ವಾಮಿಗಳು *

ಬ್ರಾಹ್ಮೀ ಮುಹೂರ್ತದಲ್ಲಿ ಅಂದರೆ ಬೆಳಗಾಗುವ ಮುಂಚೆ ೪೦ ನಿಮಿಷ ಮುಂಚೆಯೇ ಏಳಬೇಕು. ಪ್ರಾತರ್ವಿಧಿಗಳ ನಂತರ ಸ್ನಾನ ಮಾಡಬೇಕು.

ಪ್ರಾರ್ಥನೆಗೆ ಕೂಡ್ರುವ ಮುಂಚೆ ಕೈಕಾಲು–ಮುಖ ತೊಳೆದುಕೊಂಡು ಶುಚಿರ್ಭೂತರಾಗಿರಬೇಕು.

**ಶಿಸ್ತು :** ಪ್ರಾರ್ಥನೆಗೆ ಎಲ್ಲರೂ ಸಾಲಾಗಿ ಕುಳಿತುಕೊಳ್ಳಬೇಕು. ಯಾವ ನಿಟ್ಟಿನಿಂದ ನೋಡಿದರೂ ಸಾಲುಗಳು ಸಮನಾಗಿರಬೇಕು. ತಡವಾಗಿ ಬಂದವರು ಸಪ್ಪಳ ಮಾಡದೆ ಹಿಂದಿನ ಸಾಲಿನಲ್ಲಿ ಕ್ರಮಬದ್ಧತೆಯಿಂದ ಕುಳಿತಿರಬೇಕು. ನಡುನಡುವೆ ಸದ್ದುಗದ್ದಲ ಮಾಡಕೂಡದು.

**ಸಮಾನತೆ :** ಪುರುಷರು, ಸ್ತ್ರೀಯರು, ಸಣ್ಣವರು, ದೊಡ್ಡವರು, ದೀನರು, ಧನಿಕರು, ಸಕಲ ಧರ್ಮೀಯರು ಒಂದೆಡೆ ಸೇರಿ ಸಾಮೂಹಿಕ ಪ್ರಾರ್ಥನೆಯಲ್ಲಿ ಭಾಗವಹಿಸಬಹುದು ಇಲ್ಲಿ ನೀತಿಯೇ ಜಾತಿ, ಸಮಾನತಾ ಭಾವನೆಯೇ ಧರ್ಮ. ಅರ್ಥಾತ್ ಮಾನವರೆಲ್ಲರಿಗೂ ಅನ್ವಯಿಸುವ ಮಾನವ ಧರ್ಮ.

**ಶುದ್ಧಿ :** ಶುದ್ಧ ಹವೆಗಾಗಿ, ಚಿತ್ತಶುದ್ಧತೆಗಾಗಿ, ಪರಿಸರದ ಪವಿತ್ರತೆಗಾಗಿ ಲೋಬಾನ, ಸುಗಂಧದ ಊದುಬತ್ತಿಗಳನ್ನು ಪ್ರಾರ್ಥನಾ ಸ್ಥಳದಲ್ಲಿ ಹಚ್ಚಿರಬೇಕು.

**ಆಸನ :** ನೆಲದ ಮೇಲೆ ಕುಳಿತುಕೊಳ್ಳಬಾರದು. ಚಾಪಿ, ಮಣೆ, ಜಮಖಾನೆ ಏನಾದರೂ ಹಾಸಿರಲೇಬೇಕು. ಪದ್ಮಾಸನದಲ್ಲಿ ಕೂಡ್ರುವುದು ಉತ್ತಮ. ಅದು ಅಸಾಧ್ಯ ಎನಿಸಿದವರು ಸುಖಾಸನದಲ್ಲಿ ಕೂಡ್ರಬಹುದು. ಒಂದು ಗಂಟೆಯವರೆಗೆ ಒಂದೇ ಸ್ಥಿತಿಯಲ್ಲಿ ಕೂಡ್ರಬೇಕಾದುದರಿಂದ ಹೇಗೆ ಕುಳಿತರೆ ಒಂದು ತಾಸು ಸಹಿಸಲು ಶಕ್ಯವೋ ಹಾಗೆ ಕುಳಿತುಕೊಳ್ಳಿ.

ಪುರುಷರು ತಲೆಯ ಮೇಲಿನ ರುಮಾಲು, ಟೊಪ್ಪಿಗೆ ತೆಗೆದಿರಬೇಕು.

**ದೃಷ್ಟಿ :** ಅರೆದೆರೆದ ಅನಿಮಿಷದೃಷ್ಟಿ ಇರಲಿ ನಾಸಿಕದ ತುದಿಯನ್ನೇ ನೋಡುತ್ತ ಮಂತ್ರ ಪಠಿಸಿರಿ.

**ಮುದ್ರೆ :** ಎಡಗೈ (ಅಂಗೈ, ಮೇಲೆ ಬಲಗೈ ಹಸ್ತವಿರಿಸಿ ಎರಡೂ ಕೈಗಳ ಹೆಬ್ಬೆರಳುಗಳನ್ನು ಕೂಡಿಸಿರಿ. ಈ ಮುದ್ರೆಯ ಹಸ್ತ ಹೊಕ್ಕಳದ ಸಮೀಪ ಇಡಿರಿ. ಮೈ ಸಡಿಲಾಗಿರಲಿ. ಉಸಿರು ಬಿಗಿ ಹಿಡಿಯಬಾರದು. ಬಾಯಿಯಿಂದ ಉಸಿರಾಟ ಕೂಡದು.(ಮೌನಧ್ಯಾನದಲ್ಲಿ)

**ಸ್ಥಿತಿ :** ಕಾಟಕೋನದಂತೆ ನೀಟಾಗಿ ಕೂಡ್ರಬೇಕು. ಬಾಗಿ ಕೂಡ್ರಬಾರದು ಸರಳ ರೇಖೆಯಲ್ಲಿ ಕೂತುಕೊಳ್ಳಿ ಹಿಂದೆ ಮುಂದೆ ಎಡಕ್ಕೆ ಬಲಕ್ಕೆ ಹೊರಳಿನೋಡದೆ ಎದುರಿಗಿಟ್ಟ ಲಿಂಗ, ಮಹಾಪುರುಷರ ಚಿತ್ರ ಇಲ್ಲವೆ ಜ್ಯೋತಿ ಎಡೆಗೆ ದೃಷ್ಟಿ ಇರಲಿ. ಇಲ್ಲವೆ ನಿಮ್ಮ ಹೃದಯ ಮಧ್ಯದಲ್ಲಿ ಕಮಲದ ಹೂವನ್ನು ಕಲ್ಪಿಸಿ ಅದರಲ್ಲಿ ಒಂದು ಜ್ಯೋತಿ ಇದೆ ಎಂದು ಭಾವಿಸಿ ಅದನ್ನೇ ಸ್ಮರಿಸುತ್ತ ಕೂಡುವುದು ಸರ್ವಶ್ರೇಷ್ಠ.

**ಪ್ರಸಾದ :** ಪ್ರಾರ್ಥನೆಗೆ ಮೊದಲು ಎದುರಿಗೆ ಧೂಪದೀಪ ಇಟ್ಟ ಸ್ಥಳದಲ್ಲಿ ತಟ್ಟೆಯಲ್ಲಿ ಪ್ರಸಾದವೆಂದು ಹಂಚಲು ಸಕ್ಕರೆ, ಕಲ್ಲುಸಕ್ಕರೆ, ಬೆಲ್ಲ ಏನಾದರೊಂದನ್ನು ಎಲ್ಲರಿಗೂ ಸಾಲುವಷ್ಟು ಇಡಬೇಕು. ಪ್ರಾರ್ಥನೆಯ ನಂತರ ಈ ಸಿಹಿ ಪದಾರ್ಥವೇ ಪ್ರಸಾದವಾಗಿ ಪರಿಣಮಿಸುವುದು. ಅದನ್ನು ಸೇವಿಸಬೇಕು ಚೆಲ್ಲಕೂಡದು.

* ನವಕಲ್ಯಾಣಮಠ, ಭೂಸಪೇಠ, ಧಾರವಾಡ.

**ನಿಜವಾದ ಭಕ್ತಿಯ ಮುಂದೆ ವೇದಶಾಸ್ತ್ರ ಆಗಮ ಇವು ಯಾವುವೂ ನಿಲ್ಲುವುದಿಲ್ಲ.**
**- ಯು.ಎನ್. ಸಂಗನಾಳಮಠ**

**ಪ್ರಾರ್ಥನೆಯ ಮುಖ್ಯ ಮೆಟ್ಟಿಲುಗಳು :**

೧) 'ಹೇ ಪ್ರಭೋ ಪ್ರಸೀದ ಓಂ' ಮಂತ್ರವನ್ನು ಸಾಮೂಹಿಕವಾಗಿ ೧೦೮ ಸಲ ಮಾತ್ರ ಬದ್ಧವಾಗಿ ಪಠಿಸಿರಿ.

ಇದರಿಂದ ಕುಳಿತ ಸ್ಥಳವು ಪವಿತ್ರವಾಗುವುದು. ಇದಕ್ಕೆ ಭೂತಶುದ್ಧಿ ಎಂದು ಅನ್ನಬಹುದು.

೨) ಮೌನಧ್ಯಾನ : ನಂತರ ೧೦ ನಿಮಿಷ ಎಲ್ಲರೂ ಮೌನವಾಗಿದ್ದು ಮನಸ್ಸಿನಲ್ಲಿಯೇ ಕೆಳಗಿನ ನುಡಿಗಳನ್ನು ನಿಮ್ಮಲ್ಲಿ ನೀವೇ ಅಂದುಕೊಳ್ಳಿ. ಗಟ್ಟಿಯಾಗಿ ಅಲ್ಲ. ಮನಸ್ಸಿನಲ್ಲಿಯೇ ಅಂದರೆ ಇದು ಮೌನಧ್ಯಾನ.

ಅ) ಹೇ ಪ್ರಭೋ ನೀನು ಸರ್ವವ್ಯಾಪಕನಾಗಿರುವಿ.

ಬ) ಹೇ ಪ್ರಭೋ ನೀನು ಸರ್ವಕಾರಣಕರ್ತನಾಗಿರುವಿ.

ಕ) ಹೇ ಪ್ರಭೋ ನೀನು ಸರ್ವಜ್ಞಮೂರ್ತಿಯಾಗಿರುವಿ.

ಡ) ಹೇ ಪ್ರಭೋ ನೀನು ಜ್ಯೋತಿಸ್ವರೂಪನಾಗಿರುವಿ.

ಇ) ಹೇ ಪ್ರಭೋ ನೀನು ಎನ್ನ ಹೃದಯ ಕಮಲದಲ್ಲಿ ವಾಸವಾಗಿರುವಿ.

೩) ದೈವೀಶಕ್ತಿಗೆ ಆಹ್ವಾನ : ಭೂತಶುದ್ಧಿ, ಮೌನಧ್ಯಾನಗಳ ನಂತರ ಪರಿಶುದ್ಧತೆಯು ಪ್ರಾಪ್ತವಾದ ಕಾರಣ ಇನ್ನು ದೈವೀ ಶಕ್ತಿಯು ಇಳಿದು ಬರಲೆಂದು ಹಾರೈಸಿ ಮತ್ತೆ ೧೦೮ ಸಲ ಹೇ ಪ್ರಭೋ ಪ್ರಸೀದ ಓಂ ಮಂತ್ರವನ್ನು ಸಾಮೂಹಿಕವಾಗಿ ಪಠಿಸಬೇಕು.

೪) ಕೃತಜ್ಞತಾ ಸ್ತುತಿ : ಎಲ್ಲರಿಗೂ ಪ್ರಾಪ್ತವಾದ ಆನಂದ ದೈವೀಕರುಣೆಗೆ ಕೃತಜ್ಞತೆ-ಅಭಿನಂದನೆ ಸಲ್ಲಿಸಲು ಕೆಳಗಿನ ಸ್ತುತಿಗೀತೆಗಳನ್ನು ಸರಾಗವಾಗಿ ಸಾಮೂಹಿಕ ಅನ್ನಬೇಕು.

೧

*ಪರಮ ಪ್ರಭುವೆ ನಿಮ್ಮ ಸ್ಮರಣೆಯೊಳೆನ್ನ ಮನ*
*ಸ್ಥಿರವಾಗಿ ನಿಂತು ಧ್ಯಾನಿಸುತಿರಲಿ*
*ಕರಿಗೆ ಕೇಸರಿ ವೈರಿಯಂತೆನ್ನ ದುರಿತಕ್ಕೆ*
*ಹರ ನಿಮ್ಮ ನಾಮವು ಹಗೆಯಾಗಲಿ.*

*ದಿನಕರನುದಯಕ್ಕೆ ಮಿನುಗು ಚುಕ್ಕಿಗಳೆಲ್ಲ*
*ಕ್ಷಣದಲ್ಲಿ ಮಾಯವಾಗುವ ತೆರದಿ*
*ಘನಮಹಿಮ ನಿಮ್ಮ ತೇಜದೊಳೆನ್ನ ದೋಷವು*
*ಎನಿತಿಲ್ಲದಂತೆ ಹೋಗಲಿ ಭರದಿ*

*ಅಸುರತನದಲಿ ಘೋರ ಸಂಸಾರ ಸಾಗರದಿ*
*ದೆಸೆ ದಿಕ್ಕುಗಾಣದೆ ಮುಳುಗುತಿಹೆನು*
*ಶಶಿಮೌಳಿ ನೀ ಎನ್ನ ಶಿಶುವೆಂದು ಪರಿಭವಿಸಿ*
*ಒಸೆದು ಸಂತವಿಸುತ ಸಲಹೆನ್ನನು*

*ಬಾನಿನಲ್ಲಿಯ ಮೋಡ ಮುಸುಕಿ ಮಳೆಹನಿ ಸುರಿದು*
*ಮಾಣದೆ ಜಗವ ರಕ್ಷಿಪುದುತಾನು*
*ಜ್ಞಾನನಿಧಿಯೆ ಅಂತಃಕರಣ ವಾರಿಧಿಯಿಂದೆ*
*ದೀನ ತಬ್ಬಲಿ ಎನ್ನ ಪೊರೆಯೊ ನೀನು*
*ಬಂದು ಪರಿಮಳಕೆಳಸಿ ತುಂಬಿಯು ತರುಲತೆಯ*
*ಹೊಂದಿ ಕಂಪನು ಸವಿಯು ವಂದದಲಿ*
*ತಂದೆ ಶ್ರೀ ಕುಮಾರೇಶ ಪ್ರಭು ನಿಮ್ಮ ಚರಣದೊಳ್*
*ಕುಂದದೆನ್ನಯ ಮನ ಮೀಸಲಿರಲಿ.*

೨

*ಎನ್ನದು ಯಾವುದಯ್ಯಾ ಎನ್ನಯದೊರೆ*
*ಅನ್ಯರದಾವುದಯ್ಯಾ*
*ಎಲ್ಲ ಸೌಭಾಗ್ಯವು ನಿನ್ನದಾಗಿರಲಾಗಿ*
*ಎನ್ನದು ಯಾವುದಯ್ಯಾ*

*ಗಂಗೆಯ ಜಲವೆಲ್ಲಿ ತುಂಗಭದ್ರೆಯದೆಲ್ಲಿ*
*ಮಂಗಳಕರಹಳ ಯಮುನೆಯಲ್ಲಿ*
*ತುಂಗತರಂಗೆಯ ಸಿಂಧು ನದಿಯದೆಲ್ಲಿ*
*ವಿಂಗಡಿಸುವರಾರೊ ಜಲನಿಧಿಯೊಳು ಪೊಕ್ಕು*

*ಚಂಪಕ ರಜವೆಲ್ಲಿ ಚಂದನರಜವೆಲ್ಲಿ*
*ಸೊಂಪಿನ ಪಾಟಲ ರಜವು ಅದೆಲ್ಲಿ*
*ಪಾರಿಜಾತದ ರಜವೆಂಬುವದನ್ನಾರು*
*ಪರಕಿಸಿ ಪೇಳ್ವರೊ ವನವಾತದಲಿ ಮಿಂದು*

*ಭಿನ್ನಭಾವವ ಬಿಟ್ಟು ನಿನ್ನ ಪೂರ್ಣತೆಯನು*
*ಚೆನ್ನಾಗಿನೋಳ್ಪ ಕಣ್ಣೆನ್ನದಾಗಿರಲಿ*
*ನಿನ್ನ ಮಹಿಮೆಯ ನನ್ನ ಕಣ್ಣಿಗೆ ತೋರಿಪ*
*ಪುಣ್ಯವೆ ಅನ್ಯರದಾಗಿರಲೆಂದಿಗು* ☆

ವಿಶ್ವಾಸಘಾತ ಮಾಡದಿರುವುದೇ ಎಲ್ಲ ಧರ್ಮಕ್ಕಿಂತಲೂ ಉತ್ತಮವಾದದ್ದು.
- ವಿದ್ವಾನ್ ಎ.ಎ. ವೆಂಕಟೇಶಶಾಸ್ತ್ರಿ.







# ಹಂಸಧ್ಯಾನ

-ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಭಗವಂತನನ್ನು ತಿಳಿದುಕೊಳ್ಳುವ, ಕಥನಿಸುವ ಪ್ರಯತ್ನ ಸಾವಿರಾರು ವರ್ಷಗಳಿಂದ ಸಾಗುತ್ತಿದೆ. ಶತಮಾನ ಶತಮಾನಗಳಿಂದ ಭಗವಂತನನ್ನು ಅರಿತವರು ಬಾಳಿ ಬದುಕಿದವರು. ತಮಗೆ ಭಗವಂತನ ಬಗ್ಗೆ ಏನು ಗೊತ್ತಾಯಿತು ಅದನ್ನು ಲೋಕದಲ್ಲೆಲ್ಲಾ ತಿಳಿಸಿಕೊಡುವ ಪ್ರಯತ್ನವನ್ನು ಮಾಡಿದರು. ಅವರು ಬಳಸಿದ ಭಾಷೆ ಆ ವಸ್ತುವನ್ನು ವರ್ಣಿಸುವ ರೀತಿ ಅತ್ಯಂತ ಮಾರ್ಮಿಕವಾಗಿತ್ತು. ಅದು ಅವಶ್ಯವೂ ಹೌದು. ಭಾಷೆ ದೃಶ್ಯ ಜಗತ್ತನ್ನು ವರ್ಣಿಸುವಂತೆ ಅದೃಶ್ಯ ವಸ್ತುವನ್ನು ವರ್ಣಿಸುತ್ತದೆ. ಈ ಭಾಷೆಯ ಮಾಧ್ಯಮವನ್ನು ಬಹಳ ನಾಜೂಕಾಗಿ ಬಳಸಿದವರು ಸಂತರು. ಸಾಮಾನ್ಯ ವಸ್ತುಗಳ ಬಗ್ಗೆ ನಾವು ಸ್ವಲ್ಪ ಅಜಾಗರೂಕ ಭಾಷೆ ಬಳಸಿದರೂ, ಆ ವಸ್ತು ಹಲವರಿಗೆ ಪ್ರತ್ಯಕ್ಷ ಇರುವುದರಿಂದ ಅಷ್ಟು ಅಪಾರ್ಥವಾಗಲಿಕ್ಕಿಲ್ಲ. ಆಧ್ಯಾತ್ಮಿಕ ರಂಗದಲ್ಲಿ ಹಾಗಾಗುವುದಿಲ್ಲ. ಮೊದಲನೆಯದಾಗಿ ಆ ವಸ್ತುವು ಅದೃಶ್ಯ. ಎರಡನೆಯದಾಗಿ ನಮ್ಮ ಸಹಜ ಗಮನಕ್ಕೆ ಅದು ಬರುವಂಥದೂ ಅಲ್ಲ. ಅದಲ್ಲದೆ ಅನೇಕರಿಗೆ ಅದು ಗೊತ್ತೂ ಇಲ್ಲ. ಆದ್ದರಿಂದ ಭವ್ಯ ವಸ್ತುವನ್ನು ಕುರಿತು ಭಾಷೆ ಬಳಸುವಾಗ ಬಹಳ ಜಾಗರೂಕತೆ ವಹಿಸಿದರು ಶರಣರು, ಸಂತರು, ಒಂದು ಶಬ್ದ ಹೆಚ್ಚಾಗುವಂತಿಲ್ಲ. ಕಡಿಮೆ ಆಗುವಂತಿಲ್ಲ. ಹಾಗೆ ಎಷ್ಟು ಬೇಕೋ ಅಷ್ಟು ಬಳಸಿ ಭಗವಂತನು ನಮ್ಮ ಮನಸ್ಸಿನ ಪಟಲದ ಮೇಲೆ ಸ್ಪಷ್ಟವಾಗಿ ಅಲ್ಲದಿದ್ದರೂ ಅಸ್ಪಷ್ಟವಾಗಿಯಾದರೂ ಮೂಡುವಂತೆ ಯತ್ನಿಸಿದರು. ಅವರ ಆ ತೂಕದ ಮಾತುಗಳೇ ವಚನಗಳು, ಉಪ ನಿಷತ್ತುಗಳು.

ಅದನ್ನು ನೇರವಾಗಿ ವರ್ಣಿಸುತ್ತಾರೆ ಕೆಲವು ಸಲ. ಇನ್ನು ಕೆಲವು ಸಲ ಅಪ್ರತ್ಯಕ್ಷವಾಗಿ ಆ ವಸ್ತುವನ್ನು ಲಿಖಿಸುತ್ತಾರೆ. ಮೊದಲನೆಯದು ಭಾವಭಾಷೆ. ಎರಡನೆಯದು ಅಭಾವ ಭಾಷೆ. ಭಾವಭಾಷೆ ಆ ಪರಮ ಆಧ್ಯಾತ್ಮಿಕ ಸತ್ಯ ತತ್ತ್ವ ಹೇಗಿದೆ ಎಂಬುದನ್ನು ಲಕ್ಷಣೆಯ ಮೂಲಕ ಚಿತ್ರಿಸುತ್ತದೆ. ಅಭಾವ ಭಾಷೆಯು ಯಾವುದು ಆ ತತ್ತ್ವ ಅಲ್ಲ ಎನ್ನುವುದನ್ನು ಹೇಳುತ್ತದೆ. ಮೊದಲನೆಯದಕ್ಕೆ ವಿಧಿ ಮಾರ್ಗವೆಂದೂ, ಎರಡನೆಯದಕ್ಕೆ ನಿಷೇಧ ಪದ್ಧತಿ ಎಂದೂ ಹೆಸರಿಸಬಹುದೆನಿಸುತ್ತದೆ.

'ಇದು', ಎಂದು ಹೇಳುವುದು ನೇರವಾಗಿ ವಸ್ತುವನ್ನು ದರ್ಶಿಸುತ್ತದೆ. 'ಇದಲ್ಲ' ಎಂದು ಹೇಳುವುದು ಪರೋಕ್ಷವಾಗಿ ವಸ್ತುವನ್ನು ದರ್ಶಿಸುತ್ತದೆ. ಅದು ಯಾವುದೂ ಅಲ್ಲ ಎನ್ನುವುದನ್ನು ನಮಗೆ ತಿಳಿಸಿಕೊಡುತ್ತದೆ. ಎರಡನ್ನೂ ಬಳಸಿದರೆ ವಸ್ತುವಿನ ಸಂಪೂರ್ಣ ಜ್ಞಾನ ನಮಗೆ ಉಂಟಾಗುತ್ತದೆ. ಕೆಲವರಿಗೆ ವಿಧಿ ಪದ್ಧತಿ ಇಷ್ಟ. ಇನ್ನು ಕೆಲವರಿಗೆ ನಿಷೇಧ ಪದ್ಧತಿ ಇಷ್ಟ. ಅವರವರ ಸ್ವಭಾವಕ್ಕೆ ಭಾಷೆ ಬಳಸುವ ಅವಶ್ಯಕತೆ.

*ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ*
*ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾಶಿಷ್ಯತೇ*

ಒಂದು ಶಬ್ದ ಬಳಸಿ ವಿಶ್ವ ಹಾಗೂ ವಿಶ್ವಾತ್ಮನನ್ನು ಕುರಿತು ಹೇಳಬೇಕಾದ್ದನ್ನೆಲ್ಲಾ ಹೇಳಿದ್ದಾರೆ. ತಾಸು ತಾಸು ವರುಷ ಹೇಳಬಹುದಾದುದನ್ನು ಒಂದೆರಡು ಸಾಲುಗಳಲ್ಲಿ ವಿವರಿಸಿದ್ದಾರೆ. ಅಂತಿಮ ಸತ್ಯವನ್ನು ನಿಜವಾಗಿ ವರ್ಣಿಸಲು ಆಗದು. ಆದರೂ ಜ್ಞಾನಿಗಳು ಅದನ್ನು ನಾಲ್ಕೇ ನಾಲ್ಕು ಶಬ್ದಗಳಲ್ಲಿ ಗ್ರಹಿಸಿದ್ದಾರೆ; ಸಂಗ್ರಹಿಸಿದ್ದಾರೆ. ಈ ಪೂರ್ಣಮದಃ ಎಂಬ ಸಾಗರಾರ್ಥವುಳ್ಳ ಮಂತ್ರ ರಚಿಸಲು ಅನುಭಾವಿಯು ಜೀವನದ ತುಂಬಾ ಚಿಂತನೆ ಮಾಡಬೇಕಾಗಿತ್ತು, ಸತ್ಯದ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಜ್ಞಾನದ ಸ್ಥಾನ ಆತ್ಮ, ಕರ್ಮದ ಸ್ಥಾನ ಶರೀರ, ಭಕ್ತಿಯ ಸ್ಥಾನ ಹೃದಯ. - ಸಿ.ವ. ಚೆನ್ನಬಸವೇಶ್ವರ.

ದರ್ಶನ ಮಾಡಿಕೊಳ್ಳಬೇಕಾಗಿತ್ತು. ವಿಶ್ವದ ವಿಶ್ವಾತೀತವಾದ ವಸ್ತುವಿನ ಸಂಬಂಧವನ್ನು ಪ್ರತ್ಯಕ್ಷವಾಗಿ ಕಾಣಬೇಕಾಗಿತ್ತು.

ಆ ಪ್ರತಿ ಮಾತಿನ ಮೇಲೆ ಮನಸ್ಸನ್ನು ಕೇಂದ್ರೀಕರಿಸಿ ಮಾತಿನಲ್ಲಿ ಹಿಂದಿರುವಂಥ ಮರ್ಮವನ್ನು ಸವಿಯುವುದು, ಅದನ್ನು ಸವಿಯುತ್ತ ಆನಂದಮಗ್ನರಾದರೆ ಆ ಋಷಿ ಕಂಡ ಸತ್ಯ ನಮ್ಮ ಭಾವಕ್ಕೆ  ಬರುತ್ತದೆ.

ಒಂದು ಚಾಕ್ಲೇಟು ಎಂದು ಇಟ್ಟುಕೊಳ್ಳಿ. ಚಾಕ್ಲೇಟ್ ಮುರಿದು ನುಂಗಿಬಿಟ್ಟರೆ ಅದರ ರುಚಿ ಗೊತ್ತಾಗುವುದಿಲ್ಲ. ನಾಲಿಗೆಯ ಮೇಲಿಟ್ಟು ಅದರ ಸವಿಯನ್ನು ಹೀರುತ್ತಾ ಹೋದರೆ ಅದರೊಳಗಿರುವ ಎಲ್ಲಾ ಮಾಧುರ್ಯ ನಮ್ಮ ಅನುಭವಕ್ಕೆ ಬರುತ್ತದೆ! ಹಾಗೆ ಮಂತ್ರಗಳನ್ನಾಗಲಿ ವಚನಗಳನ್ನಾಗಲಿ ಕೇವಲ ಕೇಳುವುದಲ್ಲ; ಅದನ್ನು ಹೃದಯದೊಳಗೆ ಇಟ್ಟು, ಮನನ ಮಾಡಬೇಕು. ಆ ಮನನ, ಅದರಿಂಟಾಗುವ ಜ್ಞಾನರಸ ನಮ್ಮನ್ನು ಭಗವದೆತ್ತರಕ್ಕೆ ಮುಟ್ಟಿಸುತ್ತದೆ. ಯಾವ ಶರಣರಲ್ಲಿ ನಾವು ಪೂಜ್ಯ ಭಾವನೆ ತಾಳಿರುತ್ತೇವೆಯೋ ಅವರ ಒಂದು ಎರಡು ವಚನ ಮುಂಜಾವಿನಲ್ಲಿ ಓದುವುದು, ಪ್ರಪಂಚದ ಉಲಿವು ಆರಂಭವಾಗುವ ಮುಂಚೆ, ಓದಿದ ವಚನದರ್ಥವನ್ನೂ ಭಾವವನ್ನೂ ಮನನಿಸುವುದು, ಆ ಮನನ–ಆನಂದ ಮನವ ತುಂಬಿರಲು ಆ ದಿನದ ಪ್ರಾಪಂಚಿಕ ಕರ್ತವ್ಯ ಕರ್ಮಗಳ ಆಚರಿಸುವುದು. ಇದು ಆಧ್ಯಾತ್ಮ ಜೀವನ!

ಶರಣರು ಅನುಭವಮಂಟಪ ರಚಿಸಿದರು. ತಮಗೆ ಅನುಭವಕ್ಕೆ ಬಂದುದನ್ನು ಅಲ್ಲಿ ಉಳಿದವರೊಂದಿಗೆ ಹಂಚಿಕೊಂಡರು. ಅವರ ಅನುಭವ ಶ್ರೀಮಂತವಾಯ್ತು. ಅದನ್ನು ದಿನದಿನವೂ ಸವಿದು ಬದುಕನ್ನು ದಿವ್ಯವಾಗಿಸಿದರು. ನಿಜಾರ್ಥದಲ್ಲಿ ಆನಂದಶರಣರಾದರು.

ಸಾಮಾನ್ಯವಾಗಿ ಶರಣರು, ಸಂತರು ಸಣ್ಣಪುಟ್ಟ ಕಾಯಕ ಮಾಡಿಕೊಂಡಿದ್ದವರು. ಕಲಿತು ವಿದ್ವಾಂಸರಾಗಲಿಲ್ಲ. ಬಲಿತು ಅಧಿಕಾರಿಗಳಾಗಲಿಲ್ಲ; ಕಟ್ಟಿಗೆ ಕಡಿದು ಮಾರಿದರು; ಬೀಸಿದರು; ಅಡಿಗೆ ಮಾಡಿದರು; ನೇಯ್ದರು; ಉತ್ತಿಬಿತ್ತಿದರು; ಕಾಯಕದೊಂದಿಗೆ ಚಿಂತನೆ ಮಾಡಿದರು. ಅವರ ಹೃದಯ ಹಸನು. ಅದರಿಂದಾಗಿ ಬದುಕಿನ ನಿಜಸತ್ಯ ಕಂಡರು. ಸಾದಾ ಶಬ್ದಗಳಲ್ಲಿ ವಚಿಸಿದರು. ಅವೇ ವಚನಗಳು. ಅವು ಸುಸೇವ್ಯ, ಸುಶ್ರಾವ್ಯ ಹಾಗೂ ಮನನೀಯ.

ಶರಣರು ಉದ್ದೇಶಪೂರ್ವಕ ವಚನ ಹಾಡಿದವರಲ್ಲ. ಅವರು ಕಾರ್ಯರತರು; ಆತ್ಮ ಸಾಧಕರು. ಅವರ ಜೀವನಾನುಭವ ಹಾಸುಹೊಕ್ಕಾಗಿ ಶಬ್ದಗಳ ಮಧ್ಯ ತುಂಬಿತು.. ಅವರ ಕೈ ನೇಯ್ಗೆಯಲ್ಲಿ; ಅವರ ಮನಸ್ಸು ದೇವಬಟ್ಟೆಯಲ್ಲಿ. ಅವರ ವಚನಗಳಲ್ಲಿ ದೇವಾಂಬರ! ಶಬ್ದಗಳ ಸಹಾಯವಿಡಿದು ಈ ಅನುಭವಾಂಬರ ಸಿದ್ಧವಾಗುತ್ತಿತ್ತು. ಆಧ್ಯಾತ್ಮ ಹಾಗೂ ಬದುಕು ಭಿನ್ನವಾಗಿರಲಿಲ್ಲ. ನಮ್ಮದು ಅವರಂತಲ್ಲ. ನಾವು ಆಧ್ಯಾತ್ಮವನ್ನು ಬದುಕಿನಿಂದ ಬೇರ್ಪಡಿಸಿದ್ದೇವೆ. ಸಾಧ್ಯವಾದಷ್ಟು ಅಲ್ಪ ಸಮಯದಲ್ಲಿ ಆಧ್ಯಾತ್ಮಿಕ ಕಾರ್ಯ ಮಾಡಿ ಮುಗಿಸುವ ತವಕ, ಅವಸರ. ಭಗವದ್ಗೀತೆಯನ್ನಾಗಲಿ, ಬೇರೆ ಗ್ರಂಥವನ್ನಾಗಲಿ ಒಂದು ನೂರು ಸಲ ಪಾರಾಯಣ ಮಾಡಬೇಕೆಂದು ವ್ರತ ಹಿಡಿದಿರುತ್ತೇವೆ. ವ್ರತ ಪೂರೈಸುವುದೊಂದೇ ಉದ್ದೇಶ. ಪಾರಾಯಣ, ವಾಚನ ಎಷ್ಟು ತೀವ್ರ! ಸಾಕ್ಷಾತ್ ಭಗವಂತ ಕೃಷ್ಣನೇ ಬಂದು ಕೇಳಿದರೂ ಅವನಿಗೆ ನಾವು ಯಾವ ಶ್ಲೋಕ ಓದುತ್ತಿದ್ದೇವೆ ತಿಳಿಯಲಾರದು! ಹಾಗೆ ಹೀಗೆ ಒಂದು ನೂರು ದಿವಸ ಯಾವಾಗ ಮುಗಿದೀತೋ ಆಗ ಸಂಭ್ರಮ. ಕೊನೆಯ ವಾಚನದ ದಿನ ಹಬ್ಬ. ಗೀತೆ ಅರಿತು ಅಲ್ಲ. ಗೀತಾವ್ರತ ಮುಗಿಯಿತೆಂದು! ಈ ರೀತಿ ಸಾವಿರ ಪಾರಾಯಣ ಮಾಡಿದರೂ ಲಾಭವೇನು? ಭಗವದ್ದರ್ಶನವೆಲ್ಲಿ? ಆಧ್ಯಾತ್ಮಿಕ ಸಿದ್ಧಿ ಎಂತು ?

ಒಂದು ಹಕ್ಕಿ ಹಾರಿ, ಮೇಲೆ ಆಕಾಶಕ್ಕೆ ಹೋಗಿ ಮೋಡದ ಮರೆಯಲ್ಲಿ ಅವಿತು ಹಾಡಿತು! ಸ್ಕೈಲಾರ್ಕ್ ಹಾಡಿತು! ಸ್ಕೈಲಾರ್ಕ್ ಆಕಾಶದ ಹಕ್ಕಿ; ತನ್ನ ಧ್ವನಿಯನ್ನು ವಿಶ್ವದ ತುಂಬ ಹರವುವ ಹಕ್ಕಿ. ಹಾಡಿತು! ಒಬ್ಬ ಮನುಷ್ಯ

ವೇದಗಳ ಸಾರಸರ್ವಸ್ವ ಉಪನಿಷತ್ತುಗಳಾದರೆ, ಉಪನಿಷತ್ತುಗಳ ಸಾರಸರ್ವಸ್ವ ಭಗವದ್ಗೀತೆ.
- ಸಿ.ವಿ. ಚೆನ್ನಬಸವೇಶ್ವರ, ಭಾರತೀಯ ಸಂಸ್ಕೃತ ದರ್ಶನ.





ಅದನ್ನು ವಿಚಾರಿಸಿದ ; 'ಯಾಕೆ ಹಾಡುತ್ತೀ? ಯಾರೂ ಕೇಳುತ್ತಲೇ ಇಲ್ಲವಲ್ಲ?' ಹಕ್ಕಿ ಹೇಳಿತು: 'ಕೇಳುವವರಿಗಾಗಿ ಹಾಡುವವರು ಮನುಷ್ಯರು! ಭಗವಂತನ ಸಮೃದ್ಧವಾದ, ಸುಂದರ ರಾಜ್ಯದ ಆನಂದಾನುಭೂತಿ ನನ್ನ ಹೃದಯ ತುಂಬಿದೆ. ಅದು ಧ್ವನಿಯ ಮೂಲಕ ಹೊರಗೆ ಚಿಮ್ಮುತ್ತಿದೆ! ನನ್ನ ಗಾನ ಯಾರಿಗಾಗಿಯೂ ಅಲ್ಲ; ನನ್ನ ಆನಂದಕ್ಕಾಗಿ! ವಿಶ್ವವನ್ನು ಇನ್ನಷ್ಟು ಮಧುರಗೊಳಿಸಲೆಂದು. ನಾನಿರುವವರೆಗೆ ಹಾಡುವೆ. ಮನುಷ್ಯನೇ, ನನ್ನ ಗಾನ ನಿನ್ನ ಗಾನದಂತೆ ಮುಗಿಯದು!' ಪಕ್ಷಿಯದು ನಿಜವಾದ ಆನಂದಾವಿರ್ಭಾವ!

ಕಲ್ಲುಸಕ್ಕರೆಯನ್ನು ನಿಧಾನವಾಗಿ ಮೆಲ್ಲಬೇಕು, ಅದರ ರಸ ರುಚಿ ದೇಹ ಹಾಗೂ ಮನಸ್ಸನ್ನು ವ್ಯಾಪಿಸಬೇಕು. ಆಗ ಸಿಹಿಯ ಆನಂದ ತಿಳಿಯುತ್ತದೆ. ಹಾಗೆ ಸಂತರ ವಚನಗಳನ್ನು, ಶರಣರ ಮಾತುಗಳನ್ನು ಮೈತುಂಬುವಷ್ಟು ಸವಿಯಬೇಕು, ಮೆಲ್ಲಬೇಕು, ಅದೂ ಸಾವಧಾನದಿಂದ, ಮೆಲ್ಲಮೆಲ್ಲನೆ. ಆಗ ಆಧ್ಯಾತ್ಮಿಕ ಉನ್ಮಾದ ಬರುತ್ತದೆ. ಹಾಗೆ ಅನುಭವಿಸುವ ಸಾಮರ್ಥ್ಯ ನಮಗಿಲ್ಲವೆಂತಲ್ಲ. ನಮಗೆ ಅವಕಾಶವಿಲ್ಲ. ಸಮಯವಿಲ್ಲ ಅಷ್ಟೇ. ಭಗವಚ್ಚಿಂತನೆ ಮನನಕ್ಕಾಗಿ. ಬರೀ ಕೇಳಲೂ ಅಲ್ಲ, ಪಾರಾಯಣ ಮಾಡಲೂ ಅಲ್ಲ. ಎಷ್ಟು ದಿನ ಭಗವಚ್ಚಿಂತನ? ಪ್ರಶ್ನೆಗೆ ಅರ್ಥವಿಲ್ಲ. ಸೂರ್ಯೋದಯವನ್ನು ಎಷ್ಟು ದಿವಸ ನೋಡುವುದು? ತಂಪಾದ ಮಧುರ ನೀರನ್ನು ಎಷ್ಟು ದಿವಸ ಕುಡಿಯುವುದು? ಜೀವಭಾವ ಇರುವವರೆಗೆ ಚಿಂತನ! ದೇವ ಚಿಂತನ! ಜ್ಞಾನಿಗಳ ಒಂದೊಂದು ಶಬ್ದ ನಮ್ಮ ಚಿಂತನಗೆ ಸಾಕು! ಇಲ್ಲಿ ಒಂದು ಶಬ್ದವಿದೆ ನೋಡಿ.

'ಹಂಸ', ಅತಿ ಶುಭ್ರವಾದ ಸತ್ಯವಸ್ತು! ನಿಷ್ಕಳಂಕ, ಸ್ವಚ್ಛಚೇತನ, ಧೂಳು ಅಂಟದು. ಜಲ ಅದನ್ನು ತೋಯಿಸದು. ಅಗ್ನಿ ಸುಡದು. ಗಾಳಿ ಅಲುಗಿಸದು. ಭವ್ಯಚೇತನ! ಸುಂದರ, ಶುದ್ಧ. ಅದು 'ಹಂಸ'! ಹಂಸಪಕ್ಷಿಯ ವಾಸ ನಿರ್ಜನಪ್ರದೇಶದಲ್ಲಿ. ಮಾನಸ ಸರೋವರದೊಳಗೆ ಅದರ ವಿಹಾರ! ನಿಶ್ಶಬ್ದ! ಸುಶಾಂತ! ಅದು ಬೆಳ್ಳಗೆ! ಹೊರಗೂ ಒಳಗೂ! ವ್ಯಷ್ಟಿರಂಗದಲ್ಲಿ ವ್ಯಷ್ಟಿಮನಸ್ಸೇ ಸರೋವರ. ಅಲ್ಲಿ ತೇಲುವ ಚೇತನ ಹಂಸವು ಜೀವದ ಪ್ರತೀಕ.

ವಿಶ್ವರಂಗದಲ್ಲಿ ಸಮಷ್ಟಿ ಮನಸ್ಸೇ ಸರೋವರ; ಅಲ್ಲಿ ತೇಲುವ ಚೇತನ ಹಂಸವು ಈಶ. ಈ ಜೀವ, ಈಶ ಎಂಬುವು ಎರಡು ಹಂಸಗಳು, ಎರಡೂ ಶುಭ್ರ! ಅವು ಇರುವುದರಿಂದಲೇ ದೇಹಕ್ಕೂ ವಿಶ್ವಕ್ಕೂ ಶೋಭೆ. ಸೌಂದರ್ಯವಿದೆ. ಅದನ್ನು ಕಣ್ಣು ನೋಡಬೇಕು. ಕೈಕಾರ್ಯ ಮಾಡಬೇಕು. ಮನಸ್ಸು ಭಾವಿಸಬೇಕು. ಬುದ್ಧಿ ಆಲೋಚಿಸಬೇಕು. ಇದಕ್ಕೆಲ್ಲ ಜೀವಹಂಸ ಅವಶ್ಯ. ಆ ಹಂಸ ಹಾರಿ ಹೋದರೆ ಬದುಕು ಶೂನ್ಯ.

ಭವ್ಯ ಮನೆ, ಮನೆಯಲ್ಲಿ ಚಿತ್ರಗಳು, ಸಂಪತ್ತು ಭೋಗ ಭಾಗ್ಯಗಳು. ಹೆಂಡತಿ ಮಕ್ಕಳು, ರಾತ್ರಿ ಒಂದು ದೀಪ ಮಿಣುಕುತ್ತಿದೆ. ಒಂದು ಮೂಲೆಯೊಳಗೆ ಕಿರಣಗಳು ಹರಿದು ಇಡೀ ಮನೆಯನ್ನು ವ್ಯಾಪಿಸಿವೆ. ಎಲ್ಲೆಡೆ ಬೆಳಕು. ಸೌಂದರ್ಯ. ನಲಿವು ಒಲವು ಎಲ್ಲವೂ ಬೆಳಕಿನಲ್ಲಿ ಶೋಭಿಸುತ್ತಿವೆ. ಮನೆಯ ಜನರ ಮುಖದ ಕಳೆ ಹೊಳೆಯುತ್ತಿದೆ. ದೀಪ ಆರಿತೋ ಅದೆಲ್ಲ ವೈಭವ ಮಾಯ. ಆ ಹಂಸದಿದ್ದರೆ ವ್ಯಷ್ಟಿ ಸಮಷ್ಟಿ ಮನೆಗಳು ಮನೋಹರ. ಜೀವ ಹಂಸ ಶುಚಿ–ಸದ್. ಈಶ ಹಂಸ ವರಸತ್. ಎರಡು ಭಾವ–ಮಿತಿ ಇಲ್ಲದ ಅನಂತ ಚೇತನವೆ ಅಂತರಿಕ್ಷ ಸದ್(ವ್ಯೋಮ ಸದ್)

ಆ ಹಂಸ ಎಲ್ಲೆಡೆ ವಾಸಿಸಿದೆ. ಅಂತರಿಕ್ಷದಲ್ಲಿ, ಆಕಾಶದಲ್ಲಿ, ಭೂಮಿಯಲ್ಲಿ, ಭೂದೇಹಗಳಲ್ಲಿ, ಮಾನವ ದೇವತೆಗಳ ಅಂತರಂಗದಲ್ಲಿ ಆ ಸುಂದರ ಹಂಸ ತೇಲುತ್ತಲಿದೆ. ಹೀಗೆ ಭಾವಿಸಿಕೊಳ್ಳುವುದು ಭಗವಚ್ಚಿಂತನ.

ಜೀವಹಂಸದ ಸ್ಥಾನ ಭಾವ ಲಹರಿಯ ಮನಸ್ಸು. ಆ ಮನಸ್ಸನ್ನು ಭಾವ–ವೀಚಿ–ಶೂನ್ಯ ಮಾಡಿದರೆ ಹಂಸ. ಅಂದರೆ ಜೀವ ಹಂಸ ಭಾವ ಮಿತಿ ಕಳಚಿ ಈಶ ಹಂಸದಲ್ಲಿ

ಶ್ರುತಿ ಎಂದರೆ ಕೇಳಿದ್ದು, ಸ್ಮೃತಿ ಎಂದರೆ ಕೇಳಿದ್ದನ್ನು ತಲೆಯಲ್ಲಿ ತಾಳಿದ್ದು. ಆಗಮವೆಂದರೆ ಅನೂಚಾನವಾಗಿ, ಅವ್ಯಾಹತವಾಗಿ ಒಬ್ಬನಿಂದ ಒಬ್ಬನಿಗೆ ಪ್ರಾಪ್ತವಾದದ್ದು. ದರ್ಶನವೆಂದರೆ ಕೇಳಿದ್ದನ್ನು ಕೇಳಿ ತಾಳಿದ್ದನ್ನು, ಪರಂಪರಾನುಗತವಾಗಿ ಪ್ರಾಪ್ತವಾಗದ್ದನ್ನೂ ಸ್ವಬುದ್ಧಿ ಸ್ವವಿಮರ್ಶೆಗಳಿಂದ ನೋಡುವಿಕೆ. - ವಿದ್ವಾನ್ ನಾಗೇಶ ಶಾಸ್ತ್ರಿ

ಒಂದಾಗುತ್ತದೆ. ಜೀವಭಾವವೇ ಇಲ್ಲವಾಗಿ 'ಈಶ' ಕಲ್ಪನೆಯೂ ಕರಗಿ ಹೋಗುತ್ತದೆ. ಆಗ ಉಳಿದುದು ಪರಮಹಂಸ. ಅದು ಕೇವಲ ಚೇತನಾನುಭವ. ಅದು ಮುಕ್ತಿಸ್ಥಿತಿ.

ಹಂಸಸಾಧನೆ ಹೃದ್ಯ. ನಮ್ಮ ಇಂದ್ರಿಯ ಕ್ಷೇತ್ರದಲ್ಲಿ ನಮ್ಮ ಮನೋಕ್ಷೇತ್ರದಲ್ಲಿ ನಮ್ಮ ಆಲೋಚನಾ ಕ್ಷೇತ್ರದಲ್ಲಿ ಹಂಸ ತೇಲುವುದನ್ನು ಭಾವಿಸಬೇಕು. ಗುರುತಿಸಬೇಕು. ಸುತ್ತಮುತ್ತಲಿನ ಅಸಂಖ್ಯ ದೇಹಗಳಲ್ಲಿ 'ಹಂಸ'. ಈಜುವುದನ್ನು ಗುರುತಿಸುವುದು ಹಂಸಧ್ಯಾನ. ಜಗತ್ತಿನ ವಿಸ್ತಾರದಲ್ಲಿ, ಸೂರ್ಯನ ಉದಯದಲ್ಲಿ, ಜಲ ವರ್ಷಿಸುವಲ್ಲಿ, ಬೀಸುವ ಗಾಳಿಯಲ್ಲಿ ಹಂಸಗತಿಯನ್ನು ಈಕ್ಷಿಸುವುದು ಹಂಸಭಾವ.

ಅಂತರಂಗದಲ್ಲಿ ಚೇತನಾನುಭವ ಮಾಡಿಕೊಳ್ಳುವುದು ಜೀವಹಂಸ ಧ್ಯಾನ. ವಿಶ್ವದಲ್ಲಿ ಚೇತನಾಸ್ತಿತ್ವವನ್ನು ಕಾಣುವುದು ಈಶಹಂಸದರ್ಶನ. ಜೀವೇತರ ಭಾವ ತ್ಯಜಿಸಿ ಕೇವಲ ಹಂಸ (ಚೇತನ)ದತ್ತ ಈಕ್ಷಿಸುವುದು ಪರಮಹಂಸ-ಸಂಧಾನ. ಒಂದು ಅಂಗಭಾವ; ಎರಡನೆಯದು ಲಿಂಗಭಾವ. ಮೂರನೆಯದು ಅಂಗಲಿಂಗ ಸಮರಸ ಭಾವ. ಪರಮ ಹಂಸ ಸ್ಥಿತಿ.

ಈ ಸ್ಥಿತಿ ಪಡೆದವರು ಮಹಾನ್ ಸಂತರು. ಅವರಲ್ಲಿ ಅವಿದ್ಯಾದಿ ಕ್ಲೇಶಗಳಿಲ್ಲ. ಸ್ವಾನಂದವಿಹಾರಿಗಳು. ಝುರತುಷ್ಟ್ರ ಪರ್ಷಿಯಾದ ಸಂತ. ಆತನಿಂದ ವಿದ್ಯೆ ಪಡೆದ ಶಿಷ್ಯನೊಬ್ಬ ಅನುಭಾವಿಯಾದ. ಅವನ ಕಣ್ಣಲ್ಲಿ ಹಂಸ; ಹೃದಯದಲ್ಲಿ ಹಂಸ! ಎಲ್ಲೆಡೆ ಶಾಂತಿದರ್ಶನ. ಅದನ್ನು ಎಲ್ಲೆಡೆ ಹರಳು ಹೊರಟ. ಆಗದವನೊಬ್ಬ ಅವನ ಕೊಲೆ ಮಾಡಲೆಳಸಿದ. ಅರಣ್ಯಮಾರ್ಗದಲ್ಲಿ ಹಿಂದಿನಿಂದ ಬಂದು ಕತ್ತಿಯಿಂದ ಇರಿದ. ರಕ್ತ ಮಡುಗಟ್ಟಿತು. ಸಂತ ಸಾವಿನಂಚಿಗೆ ತಲುಪಿದ. ಆಗ ಆ ಕೊಲೆಗೈವ ಮನುಷ್ಯನನ್ನು ಸನಿಹ ಕರೆದು ಅವನ ಕೈಗೆ ತಾನು ಅನುಭವಿಸಿದ ಪರಮವಿದ್ಯೆಯ ಗ್ರಂಥ ಕೊಟ್ಟು ಹೇಳಿದ, 'ಇದರಲ್ಲಿ ಶಾಂತಿ ವಿದ್ಯೆ ಇದೆ. ನೀನು ಓದು; ಅನುಭವಿಸು, ಮಹಾಸಂತನಾಗು. ನಾನು ಮಾಡುತ್ತಲಿದ್ದ ಈ ಶಾಂತಿ ವಿದ್ಯಾಪ್ರಸಾರ ನೀನು ಮುಂದುವರೆದು!' ಹೀಗೆ ನುಡಿದು ಕಣ್ಣು ಮುಚ್ಚಿದ! ಗ್ರಂಥ ಪಡೆದ ಕೊಲೆಗಾರನಲ್ಲಿ ಹಂಸ ಸುಳಿಯಿತು. ಜೀವಭಾವ ಅಳಿಯಿತು. ಅನುಭಾವಿಯಾದ! 'ಅಹುರಾ ಮಝ್ದಾ' ಅವನನ್ನು ಆವರಿಸಿತು.

ಹಂಸವಿದ್ಯೆ ಅಂಗವಿಸಿದರೆ ಯಾರ ಬಗೆಗೂ ದ್ವೇಷ ಮತ್ಸರಗಳು ಇರುವುದಿಲ್ಲ. ಸ್ವಚ್ಛಂಧವಾದ ಶುಭ್ರವಾದ ಹಂಸ-ಹೃದಯ ಉಂಟಾಗಿರುತ್ತದೆ. ಕಳ್ಳ ಕೊಲೆಗಡುಕರು ಕೂಡ ಕೂಡಲಸಂಗಮನಾಗಿ ಕಾಣುತ್ತಾರೆ. ಕಳ್ಳನಾಗಿ ಬಂದವನು ಶರಣನಾಗಿ ಹೋಗುತ್ತಾನೆ. ಹಿಂಸಕನಾಗಿ ಬಂದವನು ಪ್ರೇಮಮಯಿಯಾಗಿ ಹೋಗುತ್ತಾನೆ. ಇದು ಹಂಸವಿದ್ಯೆಯ ಪರಿಣಾಮ. ಕವಿದರ್ಶನದ ಪ್ರತಿಫಲ! ಇದು ನೀರಸ ತತ್ವ ಚಿಂತನವಲ್ಲ. ಸರಸ ಸುಂದರವಾದ ಅನುಭವಶಾಸ್ತ್ರ, ಬಾಹ್ಯಾಂತರಂಗದಲ್ಲೆಲ್ಲ ಸುರಮ್ಯ ಹಂಸದರ್ಶನ!

ಎಲ್ಲ ಕಡೆ ಕತ್ತಲೆ ಆವರಿಸಿದಾಗ ಅಂತರಂಗ ಅದೊಂದು ಸರೋವರ ಎಂದು ಭಾವಿಸಿ ಅಲ್ಲಿ ಹಂಸ ತೇಲುತ್ತಿದೆ ಎಂದು ಕಲ್ಪಿಸಿ ಆ ಹಂಸದ ಧ್ಯಾನ ಮಾಡುವುದು. ಆ ಹಂಸವು ತಾನು; ತಾನೇ ಹಂಸವಾಗಿ ಪರಿಭಾವಿಸುವುದು. ಈ ಪರಿಭಾವನೆ ಕರಿಗೊಂಡುವುದಾದರೆ ದಿವ್ಯದೃಷ್ಟಿ ಪ್ರಾಪ್ತಿ. ಆಗ ಕಣ್ತೆರೆದು ಜಗವ ನೋಡಿ. ಎಲ್ಲೆಡೆ ಹಂಸ ತೇಲಿದ ಅನುಭವ. ಎಲ್ಲೆಡೆ ಶಾಂತತೆ, ಶುಭ್ರತೆ! ಇದು ಭಗವಚ್ಚಿಂತನದ ಫಲ!

☆

**ಸಿದ್ಧಗಂಗಾ ಮಾಸಪತ್ರಿಕೆ**
**ಚಂದಾದಾರರ ಗಮನಕ್ಕೆ**

ಚಂದಾದಾರರ ಸರಿಯಾದ ವಿಳಾಸವಿಲ್ಲದೆ ಪತ್ರಿಕೆಗಳು ಪತ್ರಿಕಾ ಕಾರ್ಯಾಲಯಕ್ಕೆ ಹಿಂದಿರುಗಿ ಬರುತ್ತಿವೆ. ತಾವು ದಯವಿಟ್ಟು ವಿಳಾಸ ಬದಲಾವಣೆ ಆದಲ್ಲಿ ಚಂದಾದಾರರ ಸಂಖ್ಯೆ ಹಾಗೂ ಪಿನ್‌ಕೋಡ್ ಸಹಿತ ಸರಿಯಾದ ವಿಳಾಸದೊಂದಿಗೆ ಮೊಬೈಲ್ ಸಂಖ್ಯೆಯೊಂದಿಗೆ ಪತ್ರಿಕೆ ಕಾರ್ಯಾಲಯಕ್ಕೆ ತಪ್ಪದೆ ತಿಳಿಸಲು ಕೋರಲಾಗಿದೆ.

-ಸಂಪಾದಕರು/ಪ್ರಕಾಶಕರು

ಬಾಹ್ಯ ಕರ್ಮವೊಂದೇ ಕರ್ಮವಲ್ಲ. ಕರ್ಮವು ಆಂತರಿಕವೂ ಹೌದು, ಮುಟ್ಟುವ, ಮೂಸುವ, ನೋಡುವ, ಆಡುವ, ಮಾತಾಡುವ, ಉಸಿರಾಡುವ ಎಲ್ಲ ಕ್ರಿಯಾಪರಂಪರೆಯೂ ಕರ್ಮವೇ. - ಸಿ.ವ. ಚೆನ್ನಬಸವೇಶ್ವರ.





# ಮಹಾಶಿವರಾತ್ರಿ ಒಂದು ವೈಚಾರಿಕ ಅವಲೋಕನ

-ಯೋಗೀಶ್ ನಿರ್ವಿಕಲ್ಪ *

**ಮಾ**ಘಮಾಸದ ಕೃಷ್ಣಪಕ್ಷದ ಚತುರ್ದಶಿ ದಿನದಂದು ಹಿಂದೂ ಧರ್ಮೀಯರೆಲ್ಲರೂ ಯಾವುದೇ ಭೇದಭಾವವಿಲ್ಲದೆ ಭಕ್ತಿ ಮತ್ತು ಶ್ರದ್ಧೆಯಿಂದ ಆಚರಿಸುವ ಒಂದು ಧಾರ್ಮಿಕ ಆಚರಣೆ ಮಹಾಶಿವರಾತ್ರಿ, 'ಶಿವ' ಎಂದರೆ ಕಲ್ಯಾಣ ಅಥವಾ ಮಂಗಳಕರ ಎಂದರ್ಥ. ಶಿವ, ಯೋಗಿರಾಜ ಶಿವ ಹಾಗೂ ಪರಶಿವ ಎಂದು ಮೂರು ರೂಪದಲ್ಲಿ ಶಿವತತ್ವವನ್ನು ನಮ್ಮ ಪೂರ್ವಿಕರು ವಿಂಗಡಿಸಿರುವುದನ್ನು ನಾವು ಕಾಣಬಹುದು. ಪೌರಾಣಿಕ ಹಿನ್ನೆಲೆಯಲ್ಲಿ ವ್ಯಕ್ತವಾಗುವ ಶಿವತತ್ವದ ಮೂಲಕ ಆಧ್ಯಾತ್ಮ ತತ್ತ್ವದ ಸೂಕ್ಷ್ಮ ತತ್ವ ವಿಚಾರಗಳನ್ನು ತಿಳಿಸುವ ಪಯತ್ನ ನಮ್ಮ ಪೂರ್ವಿಕರದ್ದು. ಆಧ್ಯಾತ್ಮ ತತ್ವದ ಸೂಕ್ಷ್ಮ ತತ್ತ್ವ ವಿಚಾರಗಳನ್ನು ಶಿವನಲ್ಲಿ ಸಾಂಕೇತಿಕರಿಸುವುದರ ಮೂಲಕ ಪ್ರಕೃತಿ ಮತ್ತು ಜೀವರಹಸ್ಯ ತತ್ವವನ್ನು ಅರ್ಥೈಸಿಕೊಳ್ಳಬೇಕೆಂಬ ಸದುದ್ದೇಶ ಅದರಲ್ಲಿ ಅಡಕವಾಗಿದೆ. ಸ್ಥೂಲದಿಂದ ಸೂಕ್ಷ್ಮ ತತ್ತ್ವ ವಿಚಾರದತ್ತ ಕರೆದೆಯ್ಯುವ ಪಯತ್ನ ಶಿವಪುರಾಣದಂತಹ ಗ್ರಂಥಗಳು ಮಾಡಿವೆ. ಅವುಗಳನ್ನು ನಾವು ವೈಚಾರಿಕ ನೆಲೆಗಟ್ಟಿನಲ್ಲಿ ಅರ್ಥ ಮಾಡಿಕೊಳ್ಳಬೇಕು.

'ಯೋಗಿರಾಜ ಶಿವ' ಇತಿಹಾಸದಲ್ಲಿ ಆಗಿ ಹೋದಂತಹ ಒಬ್ಬ ಶ್ರೇಷ್ಠ ತಪಸ್ವಿ, ವಿಶೇಷವಾದ ವ್ಯಕ್ತಿತ್ವವುಳ್ಳವನಾಗಿದ್ದ ಯೋಗಿರಾಜಶಿವ ಭಾರತೀಯ ಸಂಸ್ಕೃತಿ ಮತ್ತು ಆಧ್ಯಾತ್ಮ ಪರಂಪರೆಗೆ ನೀಡಿದ ಕೊಡುಗೆ ಅನನ್ಯ. 'ಪರಶಿವ' ಎಂದರೆ ನಿರ್ಗುಣ ನಿರಾಕಾರನಾದ ಪರಮಾತ್ಮ ತತ್ತ್ವವೇ ಪರಶಿವ ತತ್ವ ಎಂದು ಕರೆಯಲಾಗಿದೆ. ಜಗತ್ತಿನ ಸೃಷ್ಟಿಕರ್ತನಾದ ಪರಮಾತ್ಮ ತತ್ವವನ್ನು ನಾವೆಲ್ಲರೂ ಬದುಕಿನಲ್ಲಿ ಸಾಕ್ಷಾತ್ಕರಿಸಿಕೊಳ್ಳಬೇಕೆಂಬ ಮುಖ್ಯ ಧ್ಯೇಯದ ತತ್ವ ಸಾರವೇ ಪರಶಿವ ತತ್ವ ಎನಿಸಿಕೊಂಡಿದೆ.

ಪೌರಾಣಿಕ ಹಿನ್ನೆಲೆಯ ದೃಷ್ಟಿಯಿಂದ ಮಹಾಶಿವರಾತ್ರಿಯನ್ನು ಅವಲೋಕಿಸುವುದಾದರೆ ಶಿವರಾತ್ರಿ ಬಹು ವಿಶೇಷತೆಯ ಸಂದರ್ಭಗಳಿಂದ ಕೂಡಿರುವುದನ್ನು ನಾವು ಕಾಣಬಹುದು. ಅವುಗಳೆಂದರೆ

(೧) ಕೈಲಾಸವಾಸಿ ಶಿವನನ್ನು ಹಿಮವಂತನ ಮಗಳಾದ ಪಾರ್ವತಿದೇವಿಯು ರಾತ್ರಿಯಿಡೀ ಶಿವನಾಮ ಪಠಿಸುತ್ತಾ ಶಿವನನ್ನು ಮೆಚ್ಚಿಸಿ ವಿವಾಹವಾದ ಮಂಗಳಕರ ದಿನ ಶಿವರಾತ್ರಿಯಾಗಿದೆ.

(೨) ದೇವತೆಗಳು ಮತ್ತು ಅಸುರರ ನಡುವೆ ಸಮುದ್ರ ಮಥನ ನಡೆದು ಹಾಲಾಹಲ ಹೊರಬಂದಾಗ ಅದನ್ನು ಶಿವ ಕುಡಿದ ಸಂದರ್ಭದಲ್ಲಿ ಪಾರ್ವತಿಯು ಅದನ್ನು ಗಂಟಲೊಳಗಿನಿಂದ ಇಳಿಯದಂತೆ ರಾತ್ರಿಯಿಡೀ ತಡೆದ ದಿನ ಶಿವರಾತ್ರಿ ಎನಿಸಿದೆ.

(೩) ಶಿವಸಾನಿಧ್ಯದಲ್ಲಿದ್ದ ಗಂಗೆಯನ್ನು ಭಗೀರಥ ಮಹಾರಾಜನು ತನ್ನ ತಪಸ್ಸಿನ ಬಲದಿಂದ ಧರೆಗೆ ಇಳಿಯುವಂತೆ ಮಾಡಿದ ಪರಮ ಪವಿತ್ರ ದಿನ ಶಿವರಾತ್ರಿ ಎನಿಸಿಕೊಂಡಿದೆ.

(೪) ಬ್ರಹ್ಮ ಮತ್ತು ವಿಷ್ಣುಗಳಿಬ್ಬರ ನಡುವೆ ಉಂಟಾದ ಅಹಂಕಾರದ ಶಮನಕ್ಕಾಗಿ ಶಿವ ಲಿಂಗರೂಪದಲ್ಲಿ ನೆಲೆನಿಂತ ದಿನವೂ ಸಹ ಶಿವರಾತ್ರಿ ಎನಿಸಿದೆ.

(೫) ನಿರ್ಮಲ ಮನಸ್ಸಿನಿಂದ ಬೇಡರ ಕಣ್ಣಪ್ಪ ಶಿವನನ್ನು ಪೂಜಿಸಿ ಶಿವನ ಅನುಗ್ರಹಕ್ಕೆ ಒಳಗಾದ ದಿನ ಶಿವರಾತ್ರಿ ಎಂದು ಶಿವಪುರಾಣದಂತಹ ಗ್ರಂಥಗಳು ಉಲ್ಲೇಖಿಸಿರುವುದನ್ನು ನಾವು ಕಾಣಬಹುದು.

ನಮ್ಮೆಲ್ಲಾ ಶಾಸ್ತ್ರ ಗ್ರಂಥ ಮತ್ತು ಪುರಾಣಗಳ ಅನುಸಾರ

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ.

ನೆರಳೆಂದರೆ ಮಾಯೆ. ಬೆಳಕೆಂದರೆ ಕೇವಲ ಜ್ಞಾನ, ಅರಿವು, ಆತ್ಮಸಾಕ್ಷಾತ್ಕಾರ, ನಿಜದ ನಿಲವು.
- ಸಿ.ಎನ್. ಹಿರೇಮಠ.

ಶಿವರಾತ್ರಿ ಅತ್ಯಂತ ಪವಿತ್ರ ದಿನ ಎನಿಸಿಕೊಂಡಿದೆ. ಅಂದು ಶಿವನನ್ನು ಶುದ್ಧ ಮನಸ್ಸಿನಿಂದ ಪೂಜಿಸಿದರೆ ನಮ್ಮೆಲ್ಲ ಪಾಪ ಕರ್ಮಗಳು ನಮ್ಮಿಂದ ದೂರುಗೊಳ್ಳುತ್ತದೆ ಎಂಬ ನಂಬಿಕೆ ಭಕ್ತರದು. ಸಾಮಾನ್ಯವಾಗಿ ಶಿವರಾತ್ರಿ ದಿನದಂದು ಎಲ್ಲಾ ಶಿವಾಲಯಗಳಲ್ಲಿಯೂ ವಿಶೇಷವಾದ ಪೂಜೆಗಳು ನಡೆಯುವುದನ್ನು ನಾವು ನೋಡಿದ್ದೇವೆ. ಲಿಂಗಾರಾಧನೆ, ಉಪವಾಸ ಮತ್ತು ಜಾಗರಣೆಗಳ ಸಂಗಮ ಶಿವರಾತ್ರಿ ಎನಿಸುವುದರ ಮೂಲಕ ದೇಶಾದ್ಯಂತ ಇರುವ ದ್ವಾದಶ ಜ್ಯೋತಿರ್ಲಿಂಗಗಳ ದರ್ಶನ ಪಡೆಯುವುದು ಬದುಕಿನ ಸಾರ್ಥಕತೆ ಎಂದೂ ಸಹ ಭಕ್ತರು ಭಾವಿಸಿದ್ದಾರೆ. ದ್ವಾದಶ ಜ್ಯೋತಿರ್ಲಿಂಗಗಳಾದ ಸೋಮನಾಥೇಶ್ವರ (ಗುಜರಾತ್), ಶ್ರೀಶೈಲ ಮಲ್ಲಿಕಾರ್ಜುನ (ಶ್ರೀಶೈಲ), ಮಹಾಕಾಳೇಶ್ವರ (ಮಧ್ಯಪ್ರದೇಶ), ಓಂಕಾರೇಶ್ವರ (ಮಧ್ಯಪ್ರದೇಶ), ಕೇದಾರನಾಥೇಶ್ವರ (ಉತ್ತರ ಖಂಡ),ಭೀಮಶಂಕರ (ಮಹಾರಾಷ್ಟ್ರ), ತ್ರ್ಯಂಬರೇಶ್ವರ (ಮಹಾರಾಷ್ಟ್ರ), ಕಾಶಿವಿಶ್ವೇಶ್ವರ (ಉತ್ತರ ಪ್ರದೇಶ), ವೈದ್ಯನಾಥೇಶ್ವರ (ಜಾರ್ಖಂಡ್), ನಾಗೇಶ್ವರ ( ಗುಜರಾತ್), ಘೃಷ್ಣೇಶ್ವರ (ಮಹಾರಾಷ್ಟ್ರ), ರಾಮೇಶ್ವರ (ತಮಿಳುನಾಡು) ದೇವಾಲಯಗಳು ಪೌರಾಣಿಕ ಮತ್ತು ಪ್ರಾಕೃತಿಕ ಸೌಂದರ್ಯದಿಂದಲೂ ಹಲವು ಕುತೂಹಲಕಾರಿ ಐತಿಹ್ಯಗಳಿಂದ ಕೂಡಿರುವುದು ಗಮನಾರ್ಹ ಸಂಗತಿ. ವಿಶೇಷ ವಾಸ್ತುವಿನ್ಯಾಸ ಮತ್ತು ವಿಶಿಷ್ಟ ಕಲ್ಲುಗಳಿಂದ ರೂಪುಗೊಂಡಿರುವ ಶಿವಲಿಂಗಗಳಿಂದ ಕೂಡಿರುವ ಈ ದೇವಾಲಯಗಳು ಭಕ್ತಿ ಪರವಶತೆಯನ್ನು ಉಂಟು ಮಾಡುತ್ತದೆ. ಶಾಂತಿ ಹರಸಿ ಬಂದ ಭಕ್ತರಿಗೆ ಸಾತ್ವಿಕ ಮನಸ್ಥಿತಿಯನ್ನು ಉಂಟು ಮಾಡುತ್ತದೆ. ದೇವಾಲಯದ ಶಿವಲಿಂಗಗಳಿಂದ ಹೊರಹೊಮ್ಮುವ ವಿಶಿಷ್ಟವಾದ ತರಂಗಗಳು ಭಕ್ತರ ಮನಸ್ಸನ್ನು ಪ್ರಶಾಂತಗೊಳಿಸುತ್ತದೆಂದು ವೈಜ್ಞಾನಿಕವಾಗಿಯೂ ವಿಶ್ಲೇಷಿಸಿರುವುದನ್ನು ನಾವು ಕಾಣಬಹುದು.

ಮನದೊಳಗಿನ ಮಹಾಲಿಂಗ (ಪರಮಾತ್ಮ) ತತ್ವವನ್ನು ಕಾಣುವುದಕ್ಕೆ ಭಕ್ತಿ ಆಚರಣೆಯ ವಿಧಿವಿಧಾನಗಳು ಅತ್ಯಂತ ಅಗತ್ಯ. ಭಕ್ತಿಯ ಆಚರಣೆ ಪರಮಾತ್ಮ ತತ್ವವನ್ನು ಕಾಣುವುದಕ್ಕೆ ಸಕಾರಣವಾಗಬೇಕು. ನಾವು ಮಾಡುವ ಭಕ್ತಿ ನಮ್ಮ ಹೃದಯವನ್ನು ವಿಕಸಿಸಬೇಕು. ಎಲ್ಲರೂ ತಮ್ಮವರೆಂದು ಭಾವಿಸುವ ನಿಸ್ವಾರ್ಥತೆಯ ಭಾವ ನಮ್ಮ ಭಕ್ತಿಯ ಆಚರಣೆಯಿಂದ ನಮ್ಮೊಳಗೆ ಮೂಡಿದರೆ, ಅದುವೇ ನಾವು ಭಗವಂತನಿಗೆ ಸಲ್ಲಿಸುವ ನಿಜವಾದ ಅರ್ಥದಲ್ಲಿ ಭಕ್ತಿ ಎನಿಸುತ್ತದೆ. ಅದುವೇ ನಿಜಾರ್ಥದಲ್ಲಿ ಶಿವರಾತ್ರಿ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ.

**ಗುರುಬಸವಣ್ಣನವರ ದೃಷ್ಟಿಯಲ್ಲಿ ಶಿವರಾತ್ರಿ !**

ನಮ್ಮ ಅಂತರಂಗದಲ್ಲಿ ಅಂತರ್ಗತವಾಗಿರುವ ನಿರ್ಗುಣ, ನಿರಾಕಾರನಾದ ಪರಮಾತ್ಮ (ಪರಶಿವ) ನ ಅನುಭಾವವನ್ನು ಅನುಭಾವಿಸುವದೇ ಮಾನವ ಬದುಕಿನ ನಿಜವಾದ ಸಾರ್ಥಕತೆ ಎಂದು ತಿಳಿಸಿದವರು ಶ್ರೇಷ್ಠ ದಾರ್ಶನಿಕರಾದ ಗುರು ಬಸವಣ್ಣನವರು. ನಾ ಯಾರೆಂಬ ನಿಜ ಸತ್ಯವನ್ನು ಸಂಶೋಧಿಸುವುದೇ ಬದುಕಿನ ನಿಜವಾದ ಸಾಧನೆ ಎಂದು ಉಪದೇಶಿಸಿದ ಅವರ ದೃಷ್ಟಿಯಲ್ಲಿ ಭಕ್ತಿ ಎಂದರೆ ಮನಸ್ಸಿನ ಪರಿಶುದ್ಧತೆ ಎಂದರ್ಥ.

***ಲೋಕೋಪಚಾರಕ್ಕೆ ಮಜ್ಜನಕ್ಕೆರೆವೆನಯ್ಯ***
***ಮನದ ತಾಮಸ ಬಿಡದು, ಮನದ ಕಪಟ ಬಿಡದು!***
***ಶಿವಶರಣೆಂಬುದು ಒಪ್ಪಚ್ಚಿ, ಅಳವಡದಯ್ಯ***
***ಎನ್ನ ಮನದಲ್ಲಿ ಎರಡುಳ್ಳನ್ನಕ್ಕ,***
***ಕೂಡಲಸಂಗಮದೇವನೆಂತೊಲಿವ?***

ಪರಮಾತ್ಮನನ್ನು ಪೂಜಿಸುವ ಭಕ್ತಿಯ ಆಚರಣೆ ಅದು ಕೇವಲ ಯಾಂತ್ರೀಕೃತವಾಗಿರದೆ. ಅದು ನಮ್ಮ ಮನಸ್ಸಿನೊಳಗಿನ ಕಲ್ಮಶಗಳನ್ನು ಹೊರಹಾಕಲು ಪೂರಕವಾಗಿರಬೇಕು. ಪರಮಾತ್ಮನ ಕುರಿತ ನಮ್ಮ ಭಕ್ತಿಯಲ್ಲಿ ಅನನ್ಯವಾದ ಪ್ರೀತಿ, ನಂಬಿಕೆ ಮತ್ತು ವಿಶ್ವಾಸಗಳಿಲ್ಲದಿದ್ದರೆ ಅದು ಭಕ್ತಿ ಎನಿಸಿಕೊಳ್ಳಲು ಸಾಧ್ಯವಿಲ್ಲ ಎಂಬುದು ಗುರುಬಸವಣ್ಣನವರ ವಚನ ಸಂದೇಶದ ಸ್ಪಷ್ಟೋಕ್ತಿಯಾಗಿದೆ. 'ಹರಿವ ನದಿಯ ತೆರನ ಹೋಲಬಲ್ಲಡೆ ಅದು ಭಕ್ತಿ!' ಎಂಬುದು ಗುರು ಬಸವಣ್ಣನವರ ಭಕ್ತಿ ಕುರಿತ ವೈಚಾರಿಕ ವಿಶ್ಲೇಷಣೆಯಾಗಿದೆ.

**ಕನ್ನಡ ಭಾಷೆ ಎನ್ನುವುದು ಕೇವಲ ಸಂಶೋಧನೆಯ ದಂತಗೋಪುರದ ಜಿಜ್ಞಾಸೆಯಾಗದೆ ಜನಮನದ ಎಲ್ಲ ಸ್ತರಗಳನ್ನು ಮುಟ್ಟಿ ಜನಜೀವನವನ್ನು ಹಸನುಗೊಳಿಸುವ ಪ್ರಭಾವಶಾಲಿಯಾದ ಮಾಧ್ಯಮವಾಗಬೇಕು ಎಂಬುದು ಇಂದಿನ ಅನಿವಾರ್ಯದ ಅವಶ್ಯಕತೆ. - ಡಾ. ಎಚ್. ತಿಪ್ಪೇರುದ್ರಸ್ವಾಮಿ.**





ಹರಿವ ನದಿ ಯಾವ ರೀತಿ ಕಶ್ಮಲಗಳನ್ನು ತೊಳೆದು ಶುದ್ಧೀಕರಿಸುವುದರ ಮೂಲಕ ಸಮುದ್ರ ಸೇರುವುದರತ್ತ ತನ್ನ ಗುರಿ ಗಮ್ಯತೆಗಳನ್ನು ಕೇಂದ್ರೀಕರಿಸುತ್ತದೆಯೋ ಅದೇ ರೀತಿ ನಾವು ಮಾಡುವ ಭಕ್ತಿ ನಮ್ಮ ಮನಬುದ್ಧಿಗಳ ಅಜ್ಞಾನವನ್ನು ಹೋಗಲಾಡಿಸಬೇಕು. ಪರಮಾತ್ಮನ ಪರಮಾನಂದ ಅನುಭಾವದತ್ತ ನಮ್ಮನ್ನು ಕರೆದೆಯ್ಯಬೇಕು. ಪರಿಪೂರ್ಣ ಶರಣಾಗತಿಯ ಭಾವದಿಂದ ನಾವು ಜ್ಞಾನದ ಸನಿಹ ಸಾಗಬಹುದೆಂಬ ತಾತ್ವಿಕ ಚಿಂತನೆ ಗುರು ಬಸವಣ್ಣನವರದು.

***ಹೃದಯ ಕತ್ತರಿ, ತುದಿ ನಾಲಿಗೆ ಬೆಲ್ಲಂಬೋ!***
***ಆಡಿಹೆನು ಏಂ ಬೋ, ಹಾಡಿಹೆನು ಏಂಬೋ!***
***ನಿಚ್ಚ ನಿಚ್ಚ ಶಿವರಾತ್ರಿ ಮಾಡಿಹೆನು ಏಂಬೋ !***
***ಕೂಡಲಸಂಗಮದೇವಾ, ತಾನು ತನ್ನಂತೆ.***

ಮನ ಬುದ್ಧಿಗಳಲ್ಲಿ ಕುಹಕ, ಕುಟಿಲಗಳಂತಹ ಅಶುದ್ಧತೆ (ಕತ್ತರಿ)ಯನ್ನು ಇಟ್ಟುಕೊಂಡು ಹೊರಗೆ ವಿನಯ (ಬೆಲ್ಲ)ವಂತರಾಗಿ ಭಕ್ತರೆನಿಸಿಕೊಂಬುವುದರ ಕಪಟ ವೇಷತನ ಪರಮಾತ್ಮ ಮೆಚ್ಚುವುದಿಲ್ಲ. ಅಂತಹ ಭಕ್ತಿಯ ಭಕ್ತರು ಸತ್ಪಥಕ್ಕೆ ಸಲ್ಲರೆಂಬ ಕಟು ಎಚ್ಚರಿಗೆ ಗುರು ಬಸವಣ್ಣನವರದು. ಪರಮಾತ್ಮ (ಪರಶಿವ) ನನ್ನು ನಾವು ನಮ್ಮ ಬದುಕಿನ ಪ್ರತಿಯೊಂದು ಕ್ಷಣಕ್ಷಣಗಳಲ್ಲಿಯೂ ಹಾಸು ಹೊಕ್ಕಾಗಿಸಿಕೊಳ್ಳುವುದೇ ನಿಜವಾದ ಅರ್ಥದಲ್ಲಿ ಶಿವರಾತ್ರಿ ಎನಿಸಿಕೊಳ್ಳುತ್ತದೆ. ನಡೆ–ನುಡಿಗಳು ಒಂದಾದ ಕ್ಷಣಗಳೆಲ್ಲವೂ ಶಿವರಾತ್ರಿ ಎಂಬ ದೃಢ ವಿಶ್ವಾಸ ಗುರುಬಸವಣ್ಣನವರದು.

ಪರಮಾತ್ಮನ ನಿಜಾನಂದ ತತ್ವ ನಮ್ಮ ಅಂತರಂಗದಲ್ಲಿಯೇ ಇದೆ ಎಂಬ ಸತ್ಯವನ್ನು ನಾವು ಮೊದಲು ಅರಿಯಬೇಕು. ಭಕ್ತಿಯ ಮೂಲಕ ನಾವು ನಮ್ಮ ಮನಸ್ಸನ್ನು ಅಂತರ್ಮುಖಿಯನ್ನಾಗಿಸಿಕೊಳ್ಳಬೇಕು. ನಮ್ಮ ಮನಬುದ್ಧಿಗಳಾಚೆ ಚಿರಂತನವಾಗಿ ಬೆಳಗುತ್ತಿರುವ ಶುದ್ಧಾತ್ಮ ಚೈತನ್ಯ ತತ್ವದಲ್ಲಿ ನಮ್ಮ ಮನ ಸಂಸ್ಥಿರತೆ ಕಾಣಬೇಕು. ಶುದ್ಧ ತತ್ವದಲ್ಲಿ ಮನಸ್ಸು ಸಂಸ್ಥಿರತೆ ಅನುಭಾವಿಸಿದ ಸಾಧಕ ಶರಣ ಅರ್ಥಾತ್ ಜ್ಞಾನಿ ಎನಿಸಿಕೊಳ್ಳುತ್ತಾನೆ. ಅಂತಹ ಶರಣನ ಜ್ಞಾನೋತ್ತರ ಜೀವನ ಶೈಲಿಯನ್ನು ಗುರು ಬಸವಣ್ಣನವರು ತಮ್ಮ ವಚನದಲ್ಲಿ ಈ ರೀತಿ ನಿರೂಪಿಸಿದ್ದಾರೆ.

***ಶರಣ ನಿದ್ದೆಗೈದಡೆ ಜಪ ಕಾಣಿರೊ,***
***ಶರಣನೆದ್ದು ಕುಳಿತಡೆ ಶಿವರಾತ್ರಿ ಕಾಣಿರೊ,***
***ಶರಣ ನಡೆದುದೆ ಪಾವನ ಕಾಣಿರೊ,***
***ಶರಣ ನುಡಿದುದೆ ಶಿವತತ್ವ ಕಾಣಿರೊ,***
***ನಮ್ಮ ಕೂಡಲಸಂಗನ ಶರಣನ ಕಾಯವೇ ಕೈಲಾಸ ಕಾಣಿರೊ.***

ಪರಿಪೂರ್ಣತೆ ಸಾಧಿಸಿದ ಶರಣನ ಜೀವನವೇ ಒಂದು ಸಿದ್ಧಾಂತ (ಶಿವತತ್ವ) ಎನಿಸಿಕೊಳ್ಳುತ್ತದೆ. ಬದುಕಿನ ಪ್ರತಿಯೊಂದು ಕ್ಷಣವೂ ಸಂಕೀರ್ತನೆ ಎನಿಸಿಕೊಳ್ಳುತ್ತದೆ. ಆತನು ನಡೆದಾಡಿದ ಪ್ರತಿಯೊಂದು ಸ್ಥಳವೂ ಪಾವನಗೊಂಡು ಸುಕ್ಷೇತ್ರ ಎನಿಸಿಕೊಳ್ಳುತ್ತದೆ. ಪಂಚಭೂತಾತ್ಮಕ ಶರೀರದಲ್ಲಿದ್ದುಕೊಂಡೇ, ಪರಮಾತ್ಮನ ಪರಮಾನಂದ ಕಂಡ ಕಾರಣ ಆ ಶರಣನ ಕಾಯವೇ ಕೈಲಾಸ (ಪರಿಪೂರ್ಣತ್ವದ ಪರಮಾನಂದ) ಎನಿಸಿಕೊಳ್ಳುತ್ತದೆ. ಕೈಲಾಸ ಎಂದರೆ ಎಲ್ಲಿಯೋ ಇರುವ ಭೌತಿಕ ಸ್ಥಳವಲ್ಲ. ಸತ್ತ ನಂತರ ಪ್ರಾಪ್ತಿಯಾಗುವಂತಹದ್ದು ಅಲ್ಲ. ನಮ್ಮ ಮನ ಬುದ್ಧಿಗಳ ಅಂತರಾಳದಲ್ಲಿ ಜ್ಯೋತಿಯಾಗಿ ಬೆಳಗುತ್ತಿರುವ ಶುದ್ಧಾತ್ಮ ತತ್ವದ ಆನಂದ ಕಾಣುವುದೇ ಕೈಲಾಸವಾಗಿದೆ. ಇದು ಗುರುಬಸವಣ್ಣನವರು ನೀಡುವ ಕೈಲಾಸ ಶಬ್ದದ ವೈಚಾರಿಕ ಅರ್ಥ ವಿಶ್ಲೇಷಣೆಯಾಗಿದೆ.

ಗುರುಬಸವಣ್ಣನವರ ದೃಷ್ಟಿಯಲ್ಲಿ ಶಿವರಾತ್ರಿ ನಮ್ಮ ಮನದ ಶುದ್ಧೀಕರಣದ ಅವಲೋಕನಕ್ಕೆ ಸಕಾರಣವಾಗಬೇಕು. ನಮ್ಮ ಭಕ್ತಿಯಲ್ಲಿ ಮನದ ಪರಿಶುದ್ಧತೆ ಅಭಿವ್ಯಕ್ತಗೊಳ್ಳಬೇಕು. ಭಕ್ತಿ ಸರಳ ಹಾಗೂ ಸಹಜತೆಯಿಂದ ಕೂಡಿರಬೇಕು. ಪರಮಾತ್ಮನ ಪರಮಾನಂದದ ಬೆಳಕನ್ನು ಕಾಣುವುದೇ ನಮ್ಮ ಭಕ್ತಿಯ ಮುಖ್ಯ ಉದ್ದೇಶವಾಗಿರಬೇಕು. ಈ ಎಲ್ಲಾ ಅಂಶಗಳೂ ನಮ್ಮ ಭಕ್ತಿಯಲ್ಲಿ ಅಭಿವ್ಯಕ್ತಗೊಂಡಾಗ ಮಾತ್ರ ನಮ್ಮ ಭಕ್ತಿಯ ಸಾರ್ಥಕತೆ ಕಾಣಲು ಸಾಧ್ಯ ಎಂಬುದು ಗುರುಬಸವಣ್ಣನವರ ಚಿಂತನೆಯಾಗಿದೆ. ☆

**ನಿಜವಾದ ಭಕ್ತಿಯ ಮುಂದೆ ವೇದಶಾಸ್ತ್ರ ಆಗಮ ಇವು ಯಾವುವೂ ನಿಲ್ಲುವುದಿಲ್ಲ.**
**- ಯು.ಎಸ್. ಸಂಗನಾಳಮಠ**

# ಸಮಯಪ್ರಜ್ಞೆಗೆ ಆದರ್ಶ

**'ಡಾ|| ಎಂ. ಮೋಹನ್ ಆಳ್ವ, ವಿದ್ಯಾಗಿರಿ, ಮೂಡುಬಿದರೆ ಇವರಿಗೆ ಶ್ರೀ ಶ್ರೀಗಳು ಪ್ರೇರಣೆ'**

ಕರ್ನಾಟಕದ ಮೂಡುಬಿದರೆಯಲ್ಲಿರುವ 'ಆಳ್ವಾಸ್ ಎಜುಕೇಷನ್ ಟ್ರಸ್ಟ್'ನ ರೂವಾರಿ ಡಾ|| ಎಂ. ಮೋಹನ್ ಆಳ್ವರವರು ಇಂದು ನಾಡಿನೆಲ್ಲೆಡೆ, ರಾಷ್ಟ್ರದೆಲ್ಲೆಡೆ, ಅಲ್ಲದೆ ವಿಶ್ವವಿಖ್ಯಾತ ಸಂಸ್ಥೆಯನ್ನು ಕಟ್ಟಿ ಬೆಳೆಸಿರುವವರು. ಇದೀಗ ಅವರ ಸಂಸ್ಥೆಯಲ್ಲಿ ಇಪ್ಪತ್ತು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ವಿವಿಧ ಹಂತಗಳಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ದೇಶ, ವಿದೇಶಗಳಿಂದ ವಿದ್ಯಾರ್ಥಿಗಳು ಅಲ್ಲಿಗೆ ಬಂದು ಅಧ್ಯಯನ ಮಾಡುತ್ತಿದ್ದಾರೆ.

ಡಾ|| ಎಂ. ಮೋಹನ್ ಆಳ್ವರವರು ಪ್ರಸ್ತುತ ಹತ್ತು ವರ್ಷಗಳಿಂದ ಮೂಡುಬಿದರೆಯ ವಿದ್ಯಾಗಿರಿಯಲ್ಲಿ **'ಆಳ್ವಾಸ್ ನುಡಿಸಿರಿ'** ಎಂಬ ಕನ್ನಡಹಬ್ಬವನ್ನು ಆಚರಿಸುತ್ತಿದ್ದು ೨೦೧೩ರಲ್ಲಿ ಹತ್ತನೇ ವಿಶ್ವನುಡಿಸಿರಿ ನಡೆಸುತ್ತಿದ್ದು ಎರಡು ಲಕ್ಷಕ್ಕೂ ಅಧಿಕ ಜನ ಸೇರುವರು. ಕಳೆದ ೨೦೧೦ರಲ್ಲಿ ೭ನೇ ನುಡಿಸಿರಿಯಲ್ಲಿ ನಾನು ಭಾಗವಹಿಸಿದ್ದೆನು. ಕೊನೆಯ ದಿನ ಸಾಹಿತಿಗಳೊಂದಿಗೆ ಅಭಿಮಾನಿಗಳೊಂದಿಗೆ ಒಂದು ಘಂಟೆ ಡಾ|| ಎಂ. ಮೋಹನ್ ಆಳ್ವರವರು ಪ್ರಶ್ನೋತ್ತರ ಸಂವಾದ ವ್ಯವಸ್ಥೆ ಮಾಡಿದ್ದರು. ಹಿಂದಿನ ದಿನ ನೆರೆದ ಪ್ರೇಕ್ಷಕರಿಂದ ಚೀಟಿಯ ರೂಪದಲ್ಲಿ ಮೂರುಸಾವಿರ ಪ್ರಶ್ನೆಗಳು ಬಂದಿದ್ದವು. ಬೆಳಿಗ್ಗೆ ೫.೦೦ ಗಂಟೆಗೆ ಸಂವಾದ ಆರಂಭ. ಮೊದಲ ಪ್ರಶ್ನೆ ನನ್ನದೇ ಆಗಿತ್ತು.

**ಪ್ರಶ್ನೆ : 'ಸರ್ ಈ ಸಮಾರಂಭ ಇಷ್ಟು ಅಚ್ಚುಕಟ್ಟಾಗಿ ಸಮಯಕ್ಕೆ ಸರಿಯಾಗಿ ನಡೆಯಲು ನಿಮಗೆ ಆದರ್ಶ ವ್ಯಕ್ತಿಗಳು ಯಾರು? ಯಾರಿಂದ ಪ್ರೇರಣೆ ಪಡೆದಿರುವಿರಿ?**

**ನೋಡಿ, ನನ್ನ ಬಾಲ್ಯಜೀವನದಲ್ಲಿಂದ ನಮ್ಮ ನಾಡಿನ ಇಬ್ಬರು ಮಹಾನ್ ವ್ಯಕ್ತಿಗಳೇ ನನಗೆ ಆದರ್ಶಪ್ರಾಯರು. ಈ ಎಲ್ಲಾ ಚಟುವಟಿಕೆಗಳಿಗೆ ಅವರೇ ಪ್ರೇರಣೆ. ಒಬ್ಬರು ತುಮಕೂರಿನಲ್ಲಿರುವ ಸಿದ್ಧಗಂಗೆಯ ಕರ್ನಾಟಕರತ್ನ, ನಡೆದಾಡುವ ದೇವರು ಡಾ|| ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರು ನನಗೆ ಸಮಯಪ್ರಜ್ಞೆಗೆ ಆದರ್ಶ. ಶತಾಯುಷಿ ಗಳಾದರೂ ಗಡಿಯಾರ ನಾಚುವಂತೆ ಅವರ ಕ್ರಿಯಾಶೀಲತೆ ಆದರ್ಶ.**

**ಇನ್ನೊಬ್ಬರು ಶಿಸ್ತು ಸಂಘಟನೆಗೆ ಧರ್ಮಸ್ಥಳದ ಡಾ|| ವೀರೇಂದ್ರ ಹೆಗ್ಗಡೆಯವರು ಎಂದು ಭಾವುಕರಾಗಿ ಉತ್ತರ ಕೊಟ್ಟಾಗ ನೆರೆದಿದ್ದ ಸಹಸ್ರ ಸಹಸ್ರ ಜನ ಕರತಾಡನದೊಂದಿಗೆ ಮೆಚ್ಚುಗೆ ಸೂಚಿಸಿದರು. ನಾನು ಧನ್ಯತೆಯಿಂದ ರೋಮಾಂಚಿತ ನಾದೆನು. ಆ ಕ್ಷಣ ನನ್ನಲ್ಲಿ ಈಗಲೂ ಪುಳಕವನ್ನುಂಟು ಮಾಡುತ್ತಿದೆ.**

* * *

## ಕಣ್ಣಾಲಿಗಳು ನೀರಾದವು

'ಸಿದ್ಧಗಂಗೆಯ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ನಾಡಿನ ನಡೆದಾಡುವ ದೇವರು. ಇಂದು ರಾಜ್ಯ ಹಾಗೂ ಪರರಾಜ್ಯದಿಂದ ಆಗಮಿಸಿರುವ ಹತ್ತುಸಾವಿರಕ್ಕೂ ಮಿಕ್ಕು ಬಡ ವಿದ್ಯಾರ್ಥಿಗಳು ದೀನ, ದಲಿತ ಮಕ್ಕಳು ಜಾತಿ, ಮತ, ಧರ್ಮ, ಪಂಗಡ ಭೇದವನ್ನೆಣಿಸದೆ ಅನ್ನ, ವಿದ್ಯೆ, ಜ್ಞಾನ ದಾಸೋಹ ಪಡೆಯುತ್ತಿದ್ದಾರೆ. ನಾಲ್ಕು ದಶಕದ ಹಿಂದೆ ನಾನು ಸಿದ್ಧಗಂಗೆಯಲ್ಲಿ ಅಧ್ಯಯನ ಮಾಡುತ್ತಿದ್ದಾಗ ನನ್ನ ಗೆಳೆಯ ರಲ್ಲಿ ನಾಲ್ಕೈದು ಜನ ಬ್ರಾಹ್ಮಣ ವಿದ್ಯಾರ್ಥಿಗಳಿದ್ದರೂ ದೂರದ ಶಿವಮೊಗ್ಗ ಸಮೀಪದ ಹಳ್ಳಿಯಿಂದ ಬಂದವರು. ಅಂದು ಎಲ್ಲರಂತೆ ಸಹಪಂಕ್ತಿಯಲ್ಲಿ ಕುಳಿತು ಊಟ ಮಾಡಲು ಮಡಿವಂತಿಕೆಯಿಂದ ಅಂಜುತ್ತಿದ್ದರು. ಆಗ ಶ್ರೀಗಳೇ ಮುಂದೆ ನಿಂತು ಅವರಿಗೆ ಪಾತ್ರೆಗಳನ್ನು ಕೊಡಿಸಿ ಅಡಿಗೆ ಮಾಡಿಕೊಳ್ಳಲು ವ್ಯವಸ್ಥೆ ಮಾಡುವುದರೊಂದಿಗೆ ದವಸ, ಧಾನ್ಯ, ಅಕ್ಕಿ, ಬೇಳೆ, ಕಾಳು, ಬೆಲ್ಲ, ಸಕ್ಕರೆ ಎಲ್ಲವನ್ನೂ ಒದಗಿಸಿದ್ದರು. ಅವರು ಚೆನ್ನಾಗಿ ಓದಿ ಇಂದು ಸಮಾಜದಲ್ಲಿ ಗೌರವಾನ್ವಿತ ಹುದ್ದೆಯಲ್ಲಿದ್ದಾರೆ. ಎರಡು ವಾರದ ಹಿಂದೆ ಶಿವಮೊಗ್ಗೆಗೆ ಹೋದಾಗ ಆಕಸ್ಮಿಕ ಭೇಟಿಯಾದಾಗ ಆ ಗೆಳೆಯರು ಪೂಜ್ಯಭಾವದಿಂದ ಹೇಳಿದ್ದು.................

'ಅಂದು ಪೂಜ್ಯ ಶ್ರೀ ಶ್ರೀಗಳು ನೀಡಿದ ಅನ್ನದಾಸೋಹದೊಂದಿಗೆ ಜ್ಞಾನದಾಸೋಹವನ್ನು ಪಡೆದ ನಾವೇ ಧನ್ಯರು. ನಮ್ಮ ಬಡತನದಿಂದಿದ್ದ ಮನೆತನ ಇಂದು ಉದ್ಧಾರವಾಗಿದ್ದೇವೆ. ನಾಲ್ಕು ಜನ ಉದ್ಯೋಗಿಗಳಾಗಿದ್ದೇವೆ. ಅಂದಿನಿಂದ ಪ್ರತಿವರ್ಷ ಸಿದ್ಧಗಂಗೆಗೆ ಬಂದು ಅಳಿಲು ಸೇವೆಯ ರೂಪದಲ್ಲಿ ಕಾಣಿಕೆ ನೀಡುತ್ತಾ ಬರುತ್ತಿರುವೆವು. ಶ್ರೀಶ್ರೀಗಳ ದೊಡ್ಡ ಭಾವಚಿತ್ರ ನಮ್ಮ ನಡುವಮನೆಯಲ್ಲಿದೆ. ಶ್ರೀಗಳೇ ಪ್ರತಿಕ್ಷಣ ನಮಗೆ ಆಶೀರ್ವಾದ ನೀಡುತ್ತಿರುವಂತೆ ಭಾವಿಸಿರುವೆವು' ಎಂದು ಕಣ್ಣಲ್ಲಿ ನೀರು ತುಂಬಿಕೊಂಡು ಭಾವುಕರಾದರು. ನನ್ನ ಕಣ್ಣಾಲಿಗಳೂ ನೀರಾದವು.

ಇಂತಹ ಲಕ್ಷ ಲಕ್ಷ ಬಡ ಜನರನ್ನು ಜಾತಿ, ಮತ, ಎಣಿಸದೆ ಶ್ರೀ ಶ್ರೀಗಳು ಪೊರೆದಿರುವರೋ ಆ ಶ್ರೀ ಸಿದ್ಧಲಿಂಗೇಶ್ವರನೇ ಬಲ್ಲ. ಶ್ರೀ ಶ್ರೀಗಳು ಚಿರಾಯುವಾಗಲಿ.

ವಿದ್ವಾನ್ ಎಂ.ಜಿ. ಸಿದ್ಧರಾಮಯ್ಯ
ಉಪನ್ಯಾಸಕರು, ಶ್ರೀಮಠದ ಹಳೆಯ ವಿದ್ಯಾರ್ಥಿ


**'ಸಿದ್ಧಗಂಗಾ' ಮಾಸಪತ್ರಿಕೆ ಚಂದಾದಾರರಲ್ಲಿ ಮನವಿ**

೨೦೧೩ರ ನಿಮ್ಮ ವಾರ್ಷಿಕ ಚಂದಾ ಅವದಿ ಮುಗಿದಿರುವ ಸದಸ್ಯರುಗಳು ೨೦೧೪ನೇ ಸಾಲಿಗೆ ನವೀಕರಿಸಿಕೊಳ್ಳ ಬೇಕಾಗಿ ವಿನಂತಿ.

ನಿಮ್ಮ ವಿಳಾಸ ಬದಲಾವಣೆ ಆದ ಕೂಡಲೆ ಹೊಸ ವಿಳಾಸವನ್ನು ಚಂದಾ ನಂಬರ್ ತಪ್ಪದೇ ಸೂಚಿಸಿ ಈ ಕೆಳಕಂಡ ವಿಳಾಸಕ್ಕೆ ಪತ್ರ ಮೂಲಕ ತಿಳಿಸಬೇಕಾಗಿ ನಮ್ರ ವಿನಂತಿ.

ವಾರ್ಷಿಕ ಚಂದ ರೂ. ೨೦೦/- ಆಜೀವ ಚಂದಾ ರೂ. ೧೫೦೦/- 'ಸಿದ್ಧಗಂಗಾ' ನಿಮ್ಮ ಮನೆ ನಿರಂತರವಾಗಿ ಬೆಳಗಲು ಆಜೀವ ಸದಸ್ಯತ್ವ ಪಡೆಯಿರಿ. ಚಂದಾ ಹಣವನ್ನು ಈ ವಿಳಾಸಕ್ಕೆ ಕಳುಹಿಸಿರಿ.

**ಪ್ರಕಾಶಕರು**
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ -೫೭೨ ೧೦೪.


**ಪತ್ರಿಕೆ ಕುರಿತು ಅಭಿಪ್ರಾಯ....**

ಸಿದ್ಧಗಂಗಾ ಮಾಸಪತ್ರಿಕೆಯು ಅತ್ಯುತ್ತಮವಾಗಿ ಪ್ರಕಟವಾಗುತ್ತಿರುವುದು ನಿಜಕ್ಕೂ ಸ್ತುತ್ಯಾರ್ಹ. ಇದರಲ್ಲಿ ಬರುವ ಒಂದೊಂದು ಲೇಖನವು ಅತ್ಯುತ್ತಮವಾಗಿವೆ. ಈ ಮಾಸಪತ್ರಿಕೆಯು ನಿಜಕ್ಕೂ ಶ್ರೇಷ್ಠವಾಗಿದ್ದು ಮಾನವನನ್ನು ದೈವತ್ವದ ಕಡೆಗೆ ಒಯ್ಯಲು ಸೋಪಾನ ಎಂದರೆ ತಪ್ಪಾಗಲಾರದು. ಅಲ್ಲದೆ ಕೇವಲ ಇದು ಆಧ್ಯಾತ್ಮದ ಕಡೆಗೆ ಮಾತ್ರ ಸಂಬಂಧಿಸಿರದೆ ಸಾಮಾಜಿಕ, ಆರೋಗ್ಯ, ಶಿಕ್ಷಣ ಮತ್ತು ಶ್ರೀವಾಣಿ, ಗುರುಕರಣ ತ್ರಿವಿಧಿ, ಚಿಂತನ ಹಾಗೂ ಸಾಂಸ್ಕೃತಿಕ ವಿಚಾರಗಳಿಗೆ ಸಂಬಂಧಿಸಿದ ವಿಚಾರಧಾರೆಯ ಮೊತ್ತವೇ ಇದಾಗಿದೆ.

–ಜಗದಾಂಬ, ನೆಲಮಂಗಲ

* * *

ಸಿದ್ಧಗಂಗಾ ಮಾಸಪತ್ರಿಕೆಯ ಬಗ್ಗೆ ಎಷ್ಟು ಹೇಳಿದರೂ ಸಾಲದು. ಪತ್ರಿಕೆಯಲ್ಲಿ ಬರುವ ವಿಚಾರಧಾರೆಗಳು, ಅರ್ಥಸಹಿತವಾಗಿ ಸಿದ್ಧಲಿಂಗೇಶ್ವರ ವಚನ ಮತ್ತು ಗುರು ಕರುಣತ್ರಿವಿಧಿ ಮತ್ತು ಶ್ರೀಕ್ಷೇತ್ರದಲ್ಲಿ ಆಗಾಗ ನಡೆಯುವ ಕಾರ್ಯಕ್ರಮಗಳ ಪರಿಚಯಗಳು, ಮನಮುಟ್ಟುವಂತೆ ಬರುತ್ತವೆ. ಪತ್ರಿಕೆಯಲ್ಲಿ ಬರುವ ಲೇಖನಗಳು ಮತ್ತು ವಚನಗಳು ಮನುಷ್ಯನ ಆಧ್ಯಾತ್ಮಿಕ ಬದುಕಿಗೆ ಒತ್ತು ಕೊಡುತ್ತವೆ.

–ಶಾರದಮ್ಮ, ರೇಣುಕನಗರ, ನೆಲಮಂಗಲ

**ಸಂಸಾರದಲ್ಲಿ ಸ್ವೈ ಎನಿಸಿಕೊಂಡವರು, ಸ್ವರ್ಗದಲ್ಲೂ ಸೈ ಎನಿಸಿಕೊಳ್ಳುವುದರಲ್ಲಿ ಸಂಶಯವಿಲ್ಲ. -ಚಿರಗನಹಳ್ಳಿ ಶಿವಶಂಕರ್**

**ಆತ್ಮದೃಷ್ಟಿಯಿಂದ ಯಾರೂ ಅಳಿಯುವುದಿಲ್ಲ, ದೇಹದ ದೃಷ್ಟಿಯಿಂದ ಯಾರೂ ಇಲ್ಲಿ ಉಳಿಯುವುದಿಲ್ಲ.**
**- ಸಿ.ವಿ. ಚನ್ನಬಸವೇಶ್ವರ.**

# ಕಿನ್ನರಿ ಬೊಮ್ಮಯ್ಯ

-ಎಚ್.ಎಸ್. ಸಿದ್ಧಗಂಗಪ್ಪ *

ಬಸವಾದಿ ಶರಣರ ಕಾಯಕತತ್ತ್ವದಲ್ಲಿ ಎಲ್ಲ ವೃತ್ತಿಗಳಿಗೂ ಸಮಾನ ಗೌರವವಿತ್ತು. ಇಲ್ಲಿ ಮೇಲು ಕೀಳಿಗೆ ಅವಕಾಶವಿರಲಿಲ್ಲ. ಕಲ್ಯಾಣದಲ್ಲಿದ್ದ ಅನೇಕ ಶರಣರು ತಾವು ಮಾಡುವ ಕಾಯಕವನ್ನು ಹೆಸರಿನ ಮುಂದೆ ಸೇರಿಸಿಕೊಂಡು ಜನಪ್ರಿಯರಾದರು. ಅವರಿಗೆ ನಾವು ಮಾಡುವ ಕಾಯಕ ವನ್ನು ಹೇಳಿಕೊಳ್ಳುವಾಗ ಯಾವುದೇ ರೀತಿಯ ಮುಜು ಗರವಾಗಲಿ, ಕೀಳರಿಮೆಯಾಗಲಿ ಅವರ ಕನಸು ಮನಸಿ ನಲ್ಲೂ ಇರಲಿಲ್ಲ. ಮೇಲಾಗಿ ಹಾಗೆ ಹೇಳಿಕೊಳ್ಳಲು ಅಭಿಮಾನವಿತ್ತು, ಹೆಮ್ಮೆಯೆನಿಸುತ್ತಿತ್ತು. ಇಂಥ ಕಾಯಕ ಜೀವಿಗಳ ಸಾಲಿಗೆ ಕಿನ್ನರಿ ಬೊಮ್ಮಯ್ಯನೂ ಸೇರುತ್ತಾನೆ. ಕಿನ್ನರಿಯನ್ನು ನುಡಿಸಿ ಅದರಿಂದ ಬಂದ ಪ್ರತಿಫಲದಿಂದ ಸಂತೋಷವಾಗಿ ದಾಸೋಹ ನಡೆಸುತ್ತ ಜೀವನ ಸಾಗಿಸಿ ಶಿವನ ಒಲುಮೆಯನ್ನು ಪಡೆದ ಮಹಾಶರಣ.

ಕಿನ್ನರಿ ಬೊಮ್ಮಯ್ಯನ ಬಾಲ್ಯ ವೃತ್ತಾಂತ ಅಷ್ಟಾಗಿ ತಿಳಿದು ಬರುವುದಿಲ್ಲ. ಅವನು ದೊಡ್ಡವನಾಗಿ ಕಲ್ಯಾಣಕ್ಕೆ ಬಂದು ತನ್ನ ಆರಾಧ್ಯದೈವ ತ್ರಿಪುರಾಂತಕೇಶ್ವರನ ದಿವ್ಯಸನ್ನಿಧಿ ಯಲ್ಲಿ ಭಕ್ತಿಪರವಶನಾಗಿ ಕಿನ್ನರಿ ಬಾರಿಸುತ್ತಾ ಮೈಮರೆ ಯುತ್ತಾನೆ. ಕಿನ್ನರಿಯ ಸುಮಧುರ ನಾದ ದೇವಾಲಯದಿಂದ ತೆರೆತೆರೆಯಾಗಿ ಗಾಳಿಯಲ್ಲಿ ಸೇರಿ ಸುತ್ತಮುತ್ತಲಿನ ವಾತಾ ವರಣವನ್ನು ಮಂಗಳಮಯವನ್ನಾಗಿಸುತ್ತಿತ್ತು.

ಕಿನ್ನರಿ ಬೊಮ್ಮಯ್ಯನ ಜನ್ಮಸ್ಥಳ ಆಂಧ್ರಪ್ರದೇಶದ ಪುಂತೂರು ಎಂಬ ಪುಣ್ಯಗ್ರಾಮ. ಆತನ ತಾಯಿ ಕಲಿದೇವಿ. ತಂದೆಯ ಹೆಸರು ತಿಳಿದು ಬಂದಿಲ್ಲ. ಆತನ ತಂದೆ ಚಿಕ್ಕ ವಯಸ್ಸಿನಲ್ಲಿಯೇ ಕಾರಣಾಂತರಗಳಿಂದ ದೂರವಾಗಿರ ಬೇಕು. ತಾಯಿಯೇ ಮಗನ ಜವಾಬ್ದಾರಿಯನ್ನು ಹೊತ್ತು ಸುಸಂಸ್ಕೃತ ವ್ಯಕ್ತಿಯನ್ನಾಗಿ ರೂಪಿಸಲು ತನ್ನ ಜೀವನವನ್ನೇ ಮೀಸಲಾಗಿಟ್ಟಿರಬೇಕು. ಅವನ ಜೀವನದಲ್ಲಿ ತಾಯಿ ಮಹತ್ತರ ಪಾತ್ರ ವಹಿಸಿದ್ದರಿಂದಲೇ ತಂದೆಯ ಹೆಸರು ಗೌಣವಾಗಿರ ಬೇಕು. ಬೊಮ್ಮಯ್ಯನ ವೃತ್ತಿಯಲ್ಲಿ ಅಕ್ಕಸಾಲಿಗನಾಗಿದ್ದವನು. ಪರಂಪರಾನುಗತವಾಗಿ ಬಂದ ಅಕ್ಕಸಾಲಿಗ ವೃತ್ತಿಯಲ್ಲಿ ಪರಿಣತಿಯನ್ನು ಪಡೆಯಲು ತಂದೆಯ ಮಾರ್ಗದರ್ಶನ ವನ್ನು ಪಡೆಯುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಆದರೂ ಅವನ ತಂದೆ, ಮಡದಿ ಮಕ್ಕಳ ವಿಚಾರವಾಗಲಿ ತಿಳಿದು ಬರುತ್ತಿಲ್ಲ. ಬಹುಶಃ ಶರಣರು ತಮ್ಮ ಸ್ವವಿವರಗಳನ್ನು ಹೇಳಿಕೊಳ್ಳಲು ಇಷ್ಟಪಡದೆಯಿರುವುದೂ ಕಾರಣವಾಗಿರ ಬಹುದು.

ವೃತ್ತಿಯಲ್ಲಿ ಅಕ್ಕಸಾಲಿಗನಾದ ಬೊಮ್ಮಯ್ಯ ಕಿನ್ನರಿ ಬೊಮ್ಮಯ್ಯನಾಗಿ ಪರಿವರ್ತನೆ ಹೊಂದಲು ಅವನ ಜೀವನ ದಲ್ಲಿ ನಡೆದ ಆಕಸ್ಮಿಕ ಘಟನೆಯೊಂದು ಕಾರಣವಾಗುತ್ತದೆ. ಒಮ್ಮೆ ಬೊಮ್ಮಯ್ಯನು ಗಿರಾಕಿಯೊಬ್ಬ ಮಾಡಿಕೊಡಲು ಕೊಟ್ಟ ಆಭರಣಗಳ ಸಿದ್ಧತೆಯಲ್ಲಿ ತೊಡಗಿದ್ದಾಗ ಜಂಗಮ ರೊಬ್ಬರು ಬಂದು ಬೇಡಲು ಆಭರಣ ಮಾಡಲು ಇಟ್ಟ ಚಿನ್ನದಲ್ಲಿ ಸ್ವಲ್ಪಭಾಗವನ್ನು ಕತ್ತರಿಸಿಕೊಡುತ್ತಾನೆ. ಇಲ್ಲಿ ಜಂಗಮ ಬೇಡಿರುವುದು ಚಿನ್ನವನ್ನೋ ಅಥವಾ ಹಣವನ್ನೋ ಎಂಬುದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಬಹುಶಃ ಬೊಮ್ಮಯ್ಯನಲ್ಲಿ ಆಗ ಜಂಗಮನಿಗೆ ಕೊಡಲು ಹಣವಿಲ್ಲದೆ ಬೇಡಿ ಬಂದವರನ್ನು ಬರಿಗೈಲಿ ಕಳಿಸಬಾರದೆಂಬ ಶರಣ ಸಂಸ್ಕೃತಿ ಅವನಲ್ಲಿ ಅಂತರ್ಗತವಾಗಿದ್ದುದರಿಂದ ಆಭರಣ ಮಾಡಲು ಇಟ್ಟ ಬಂಗಾರದಲ್ಲಿ ಸ್ವಲ್ಪ ಭಾಗವನ್ನು ಕತ್ತರಿಸಿ ಕೊಡುತ್ತಾನೆ. ನಂತರ ಗಿರಾಕಿಗೆ ಕೊಡುವ ಒಡವೆಯ ತೂಕಕ್ಕೆ ಸರಿಮಾಡಿ ಕೊಡುತ್ತಾನೆ. ಮತ್ತೊಂದು ದಿನ ಬೊಮ್ಮಯ್ಯನ ಗುರುಗಳು ತಮಗೆ ಆಭರಣ ಮಾಡಿಕೊಂಡು ಎಂದು ಹೇಳಿ ಹಣವನ್ನು ಕೊಟ್ಟು ಕೆಲವು ದಿನಗಳ ನಂತರ ಬಂದು ತಾವು ಮಾಡಲು ಕೊಟ್ಟ ಒಡವೆಯನ್ನು ಕೇಳಿದ ರೆಂದೂ ಹಾಗೆ ತೆಗೆದುಕೊಳ್ಳುವಾಗ ತೂಕದಲ್ಲಿ ಕಡಿಮೆ ಯಿರುವುದನ್ನು ಗಮನಿಸಿ ಕೋಪಿಸಿಕೊಳ್ಳುತ್ತಾರೆ. ಮರು ಕ್ಷಣದಲ್ಲಿಯೇ ಸಮಾಧಾನಿಯಾಗಿ 'ಬೊಮ್ಮಯ್ಯ ಹೀಗಾಗಲು ನನ್ನದೇನೂ ತಪ್ಪಿಲ್ಲ. ನೀನು ಮಾಡುತ್ತಿರುವ ಈ ಅಕ್ಕಸಾಲಿಗ ಕಾಯಕವನ್ನು ಬಿಡಿಸಲೆಂದು ಶಿವ ಹೀಗೆ ಮಾಡಿರಬೇಕು. ಶಿವನ ಚಿತ್ತ ಹೇಗಿದೆಯೋ ಬಲ್ಲವರಾರು' ಎಂದು ಹೇಳಿದಾಗ ಗುರುವಿನ ಮಾರ್ಗದರ್ಶನದಂತೆ ಅಕ್ಕಸಾಲಿಗ ವೃತ್ತಿಯನ್ನು ಬಿಟ್ಟು ಕಿನ್ನರಿಯನ್ನು ಹಿಡಿಯುತ್ತಾನೆ. ಅವನು ಕಿನ್ನರಿ ನುಡಿ ಸುವುದರಲ್ಲಿ ಪಾರಂಗತನಾಗುತ್ತಾನೆ. ಜನಪದರು ಅವನು ಕಿನ್ನರಿ ನುಡಿಸುವ ಬಗೆಯನ್ನು ಮನದುಂಬಿ ಹೊಗಳಿದ್ದಾರೆ.

*ಸಂಗೀತ ವಿದ್ಯೆಯದು ಸಂಗಡವೆ ಬಂದದ್ದು*
*ಲಿಂಗಿಗಳ ಹಿರಿಮೆ ಹಾಡುತಲಿ-ಕಲ್ಯಾಣ*
*ಲಿಂಗ ಮಂಟಪವ ಕೂಡಿದನು*
*ಕಿನ್ನರಿಯ ಬಾರಿಸುತ ಕಿನ್ನರಿಯ ರಾಗದಲಿ*
*ನನ್ನಿಯಲಿ ಹಾಡಿ ಶಿವಲೀಲೆ-ಶರಣರಿಗೆ*
*ಕಿನ್ನರಿಯ ಬೊಮ್ಮ ಮಂಟಪಕೆ*

ಬಸವಣ್ಣನವರ ಪವಾಡಸದೃಶ ವ್ಯಕ್ತಿತ್ವ ಗಡಿರಾಜ್ಯವಾದ ಆಂಧ್ರಪ್ರದೇಶದ ಪುಂಡೂರು ಗ್ರಾಮದಲ್ಲಿರುವ ಬೊಮ್ಮಯ್ಯ ನಿಗೆ ಮುಟ್ಟಿ, ಬಸವಣ್ಣನವರ ದರ್ಶನಭಾಗ್ಯ ಪಡೆಯಲು ಕಲ್ಯಾಣಕ್ಕೆ ಬರುತ್ತಾನೆ.

*ಅನುಭಾವ ಮಂಟಪಕೆ ಅನುಭಾವಿ ಬಸವಣ್ಣ*
*ಅನುನಯದಿ ಮೂಲ ಚಾಲಕನು-ಶಿವಮತಕೆ*
*ತನುಮನವ ಧನವನೆರೆದಿದ್ದ*

ಕಿನ್ನರಿ ಬೊಮ್ಮಯ್ಯನ ಶಿವಭಕ್ತಿಯನ್ನು ಕಂಡು ಬಸವಣ್ಣ ನವರು ತುಂಬ ಸಂತೋಷದಿಂದ ವಂದಿಸುತ್ತಾರೆ. ಬೊಮ್ಮಯ್ಯನ ಆಗಮನದಿಂದ ಶರಣರು ಆನಂದಸಾಗರದಲ್ಲಿ ವಿಹರಿಸುತ್ತಾರೆ.

*ಬೊಮ್ಮನಿಗೆ ಬಸವಯ್ಯ ಒಮ್ಮನದಿ ನಮಿಸಿದನು*
*ಸಮ್ಮತಿಸಿ ಇತ್ತು ಶಿವಗಣವು-ಶಿವತತ್ತ್ವ*
*ಬೊಮ್ಮ ಹುಡಿಸಿದನು ಶರಣರಿಗೆ*

ಅನುಭವ ಮಂಟಪದಲ್ಲಿ ಶರಣರ ಸಮ್ಮುಖದಲ್ಲಿ ವಚನಗಳನ್ನು ರಚಿಸಿ ಕಿನ್ನರಿ ವಾದ್ಯದ ಹಿನ್ನಲೆಯಲ್ಲಿ ಹಾಡುತ್ತಾ ಶಿವತತ್ತ್ವವನ್ನು ಪ್ರಚಾರ ಮಾಡುವ ರೀತಿಯನ್ನು ಜನಪದರು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ.

*ಶಿವ ಕೊಟ್ಟ ಕಿನ್ನರಿಯ ಭವದೊಳಗೆ ನುಡಿಸುತಲಿ*
*ಶಿವಬೋಧೆ ಜನಕೆ ಮಾಡುತಲಿ-ಬೊಮ್ಮಯ್ಯ*
*ಭವಿಗಳಿಗೆ ಊದಿ ಶಿವಮಂತ್ರ*

ಕಿನ್ನರಿ ಬೊಮ್ಮಯ್ಯನನ್ನು ಕಂಡರೆ ಬಸವಣ್ಣನವರಿಗೆ ಪ್ರೀತಿ, ಗೌರವ, ಆತ್ಮೀಯತೆಯಿತ್ತು. ಅವರಿಬ್ಬರಲ್ಲಿ ಆತ್ಮೀಯತೆ ಬೆಸುಗೆಗೊಳ್ಳಲು ಒಂದು ಘಟನೆ ಕಾರಣವಾಗುತ್ತದೆ. ಹರಿಹರನ ರಗಳೆಯಲ್ಲೂ ಈ ಪ್ರಸ್ತಾಪ ಬರುತ್ತದೆ. ಬಡವರಿಗೆ ಹೆಚ್ಚು ಪ್ರಿಯ ಹಾಗೂ ಆಧಾರವಾಗಿದ್ದ ಕಿನ್ನರಿ ಬೊಮ್ಮಯ್ಯ ನಿಗೂ ಇಷ್ಟವಾಗಿದ್ದ ಈರುಳ್ಳಿಯನ್ನು ಹೀಯಾಳಿಸಿದ ಬಸವಣ್ಣನವರಿಗೆ ತಕ್ಕ ಪಾಠ ಕಲಿಸುವುದರ ಮೂಲಕ ಈರುಳ್ಳಿ ಮಹಿಮೆಯನ್ನು ತಿಳಿಸುತ್ತಾನೆ. ಇದರಿಂದ ಅವರಿಬ್ಬರ ಆತ್ಮೀಯತೆ ಮತ್ತಷ್ಟು ಗಾಢವಾಗುತ್ತದೆ.

ಕಿನ್ನರಿ ಬೊಮ್ಮಯ್ಯನ ಜೀವನದಲ್ಲಿ ನಡೆದ ಮತ್ತೊಂದು ಘಟನೆ ಹೊಸ ತಿರುವನ್ನು ಪಡೆದುಕೊಳ್ಳುತ್ತದೆ. ಹರಕೆಯ ಕುರಿಯೊಂದು ತನ್ನ ಕೊರಳಿನ ಹಗ್ಗವನ್ನು ಕಿತ್ತುಕೊಂಡೂ ಭಯದಿಂದ ಪ್ರಾಣರಕ್ಷಣೆ ಮಾಡಿಕೊಳ್ಳಲು ತ್ರಿಪುರಾಂತಕೇಶ್ವರ ದೇವಾಲಯಕ್ಕೆ ಬರುತ್ತದೆ. ಅದನ್ನು ಬೆನ್ನತ್ತಿ ಬಂದ ವಿಟ ದೇಗುಲವನ್ನು ಪ್ರವೇಶಿಸುತ್ತಾನೆ. ತಾನು ಪ್ರೀತಿಸಿದ ವೇಶ್ಯೆಯ ಆರಾಧ್ಯ ದೇವತೆಯ ಸಂತೃಪ್ತಿಗಾಗಿ ಬಲಿಕೊಡಲು ತಂದ ಹರಕೆಯ ಕುರಿಯಾದ್ದರಿಂದ ಕುರಿಗೆ ವಿಶೇಷವಾದ ಮಹತ್ವವನ್ನು ಕೊಡುತ್ತಾನೆ. ಆ ಮುಗ್ಧಪ್ರಾಣಿ ಅಸಹಾಯಕತೆಯಿಂದ ಪ್ರಾಣ ಉಳಿಸಿಕೊಳ್ಳಲು ಗುಡಿಯ ಮೂಲೆಯಲ್ಲಿ ತ್ರಿಪುರಾಂತಕನ ಸನ್ನಿಧಿಯಲ್ಲಿ ಅವಿತು ಕೊಳ್ಳುತ್ತದೆ. ಭಯದಿಂದ ನಡುಗುತ್ತಾ ನಿಂತಿದ್ದ ಕುರಿಯ ಮೂಕ ವೇದನೆಯನ್ನು ಕಂಡು ಭಾರವಾದ ಹೃದಯದಿಂದ ವಿಟನನ್ನು ಕುರಿತು–

*ದಯವಿಲ್ಲ ಕುಲಗೇಡಿ ದಯವಿರಲಿ ಪಶುಗಳಲಿ*
*ದಯವೆ ಧರ್ಮಯ್ಯ ಜಗದೊಳಗೆ – ಪಾಲಿಸಲು*
*ಭಯವೇ ಜೀವನಿಗೆ ಭವದೊಳಗೆ*

ಎಂದು ಬುದ್ಧಿಯನ್ನು ಹೇಳುತ್ತಾನೆ. ಕಾಮಾತುರನಾದ ವಿಟನಿಗೆ ಕಿನ್ನರಿ ಬೊಮ್ಮಯ್ಯನ ಹಿತವಚನ ಹಿಡಿಸುವುದಿಲ್ಲ. ಕುರಿಯ ಬೆನ್ನತ್ತಿ ಬಂದ ವಿಟ ಸಾಮಾನ್ಯನಲ್ಲ. ಕಲ್ಯಾಣದ ದೊರೆ ಬಿಜ್ಜಳನ ಆಸ್ಥಾನದಲ್ಲಿ ಊಳಿಗ ವೃತ್ತಿಯಲ್ಲಿದ್ದ ಬೊಜ್ಜನಾಯಕ. ಅವನಿಗೆ ರಾಜನ ಆಸ್ಥಾನದಲ್ಲಿರುವೆನೆಂಬ

* ನಂ. ೫೩/೧, 'ಶಿವಕೃಪ' ೧ನೇ ಮುಖ್ಯರಸ್ತೆ, ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು-೫೬೦೦೪೦.

ನಡೆನುಡಿ ಆಚಾರವಿಚಾರ ಈ ಎಲ್ಲಕ್ಕೂ ಪುರಾಣಗಳೇ ಪ್ರಮಾಣ ಗ್ರಂಥಗಳು. - ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿ

ಪುರಾಣಗಳೆಂದರೆ ಪೂರ್ವದಲ್ಲಿ ನಡೆದ ಸಂಗತಿಗಳೆಲ್ಲವನ್ನೂ ತಿಳಿಸುವ ಗ್ರಂಥ. - ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿ

ದರ್ಪ, ಅಹಂಕಾರ. ಹಾಗಾಗಿ ಕಿನ್ನರಿ ಬೊಮ್ಮಯ್ಯನ ಯಾವ ತಿಳುವಳಿಕೆ ಮಾತುಗಳು ಹಿಡಿಸಲಿಲ್ಲ. ತಿರಸ್ಕಾರ ದಿಂದಲೇ ಪ್ರತಿ ನುಡಿಯುತ್ತಾನೆ. ಆಗ ಬೊಮ್ಮಯ್ಯ

*ಹಿಡಿಯದಿರು ಎಲೆ ಬೋಜಗ ಕಡುಪಾಪಿ ಕುರಿಯನ್ನು*
*ಹೊಡೆ ಬಡೆಯಬೇಡ ಗುಡಿಯೊಳಗೆ-ತಡೆ ಕುರಿಗೆ*
*ಕೊಡುವೆ ಬೇಡಿದ್ದ ಬೆಲೆ ನಿನಗೆ.*

ಕುರಿಯನ್ನು ಬಿಟ್ಟರೆ ನೀನು ಬೇಡಿದ್ದು ಕೊಡುವೆ ಎಂದು ಹೇಳಿದ ಕಿನ್ನರಿ ಬೊಮ್ಮಯ್ಯನ ಮಾತಿಗೆ ಆ ವಿಟ ಅಪಹಾಸ್ಯ ಮಾಡುತ್ತಾನೆ.

*ಗೇಲಿಯಲಿ ಆಡಿವನು ಜೋಲಿ ತಿಳಿಯದೆ ಮಾತ*
*ಸಾಲ ನಿನಗಾರು ಕೊಡಬೇಕು – ಬೊಮ್ಮಯ್ಯ*
*ಕೇಳು ಜಂಗಮನೆ ಸಿರಿಯುಂಟೆ.*

ಕಿನ್ನರಿ ಬೊಮ್ಮಯ್ಯನ ಕೀರ್ತಿ ಮತ್ತಷ್ಟು ಪ್ರಕಾಶಿಸಲು ಮತ್ತೊಂದು ಘಟನೆ ನಡೆಯುತ್ತದೆ. ದಿನ ಕಳೆದಂತೆ ಬೊಮ್ಮಯ್ಯ ತನ್ನ ಪರಿಶುದ್ಧವಾದ ಜೀವನದಿಂದ ಬಸವಣ್ಣನವರ ಅಂತರಂಗದ ಪ್ರಾಣಸ್ನೇಹಿತನಾಗುತ್ತಾನೆ. ಒಂದು ದಿನ ಕಿನ್ನರಯ್ಯನ ಪ್ರಾಣಪಕ್ಷಿ ದೇಹವನ್ನು ಬಿಟ್ಟು ಹಾರಿ ಹೋಗಲು ತಾಯಿಯನ್ನು ಕಳೆದುಕೊಂಡ ತಬ್ಬಲಿಯಂತೆ ಹೊರಳಾಡಿ ದುಃಖಿಸುತ್ತಾನೆ.

*ಕಿನ್ನರೇಶ್ವರ ಬೊಮ್ಮಿದೇವಾ*
*ಎನ್ನ ಜೀವಾ ಎನ್ನ ಭಾವಾ*
*ಎಲ್ಲ ಲಿಂಗವೆ ಎನ್ನ ಗುರುವೆ ಎನ್ನ ಸುರತರುವೆ*
*ಎಲ್ಲ ಪರುಷದ ಕಣಿಯೆ ಗುಣಿಯೇ*
*ಎನ್ನ ಚಿಂತಾಮಣಿಯೇ ಮೇರುವೆ*
*ಎನ್ನ ಸಜ್ಜನ ಮಿತ್ರನೇ ನೀನಿಂದು ಬಯಲಾದೆ.*

ಎಂದು ಕಿನ್ನರಿ ಬೊಮ್ಮಯ್ಯನ ಗುಣಗಳನ್ನು ನೆನೆನೆನೆದು ರೋದಿಸುತ್ತಾನೆ. ಕೂಡಲಸಂಗಮದೇವನಿಗೆ ತನ್ನ ಪ್ರಾಣವನ್ನೇ ಪಣಕ್ಕೆ ಒಡ್ಡಿ ತನ್ನ ಪ್ರಾಣಸಖನನ್ನು ಮತ್ತೆ ಪಡೆಯುತ್ತಾನೆ.

ಕಿನ್ನರಿ ಬೊಮ್ಮಯ್ಯ ಒಬ್ಬ ವಚನಕಾರನೂ ಆಗಿದ್ದಾನೆ. ಅವನ ವಚನಾಂಕಿತ 'ತ್ರಿಪುರಾಂತಕ ಲಿಂಗ'. ಆತನ ೧೮ ವಚನಗಳನು ದೊರಕಿದ್ದು ಕಿನ್ನರಿ ಬೊಮ್ಮಯ್ಯ ಅಭಿವ್ಯಕ್ತಿ ಶಕ್ತಿಯನ್ನು ತೋರಿಸಿವೆ. ದಯಾಮಯನಾದ ಭಕ್ತರ ಅಧೀನನಾದ ಭಗವಂತ ಭಕ್ತರಿಗೆ ಒಲಿವ ರೀತಿ ಹಲವು ತೆರನಾದುದು. ಇದಕ್ಕೆ ಪುರಾಣಗಳಲ್ಲಿ ಬರುವ ನಿದರ್ಶನಗಳನ್ನು ನೆನೆದ ಬೊಮ್ಮಯ್ಯ ದಿಟಭಕ್ತಿಗೆ ಒಲಿವ ದೇವನ ಕರುಣೆಯನ್ನು ಕೊಂಡಾಡಿರುವುದು ಹೀಗೆ :

*ಕಲ್ಲಿಲಿಟ್ಟವಂಗೊಲಿದೆ ಕಾಲಲೊದ್ದವಂಗೊಲಿದೆ*
*ಬಾಯಲ್ಲಿ ಉಗಿದವಂಗೊಲಿದೆ*
*ಅದು ನಿನ್ನ ಭಕ್ತಿಯೋ ಸತ್ಯವೋ ಗರ್ವವೋ*
*ತ್ರೈಭುವನಂಗಳಿಗಭೇದ್ಯ ತಿಳಿವಡೆ ನಿನ್ನ ಮಹಿಮೆ*
*ಉಮೆಯ ವರ ತ್ರಿಪುರಾಂತಕ ಲಿಂಗವೆ (೯)*

ಹರಳಯ್ಯ-ಮಧುವರಸದ ಮಕ್ಕಳ ಅಂತರಜಾತಿಯ ವಿವಾಹದ ನಂತರ ಕಲ್ಯಾಣದಲ್ಲಿ ಹರಳಯ್ಯ ಮಧುವರಸರ ಎಳೆಹೂಟೆ ಶಿಕ್ಷೆ ವಿಧಿಸಿದ ನಂತರ ಕ್ರಾಂತಿಯುಂಟಾಗಿ ಶರಣ ಸಮೂಹ ಕಲ್ಯಾಣವನ್ನು ಬಿಟ್ಟು ಉಳವಿಯತ್ತ ಪ್ರಯಾಣ ಮಾಡುತ್ತದೆ. ಆಗ ಚೆನ್ನಬಸವಣ್ಣ ಮಡಿವಾಳ ಮಾಚಯ್ಯನವರೊಂದಿಗೆ ಕಿನ್ನರಿ ಬೊಮ್ಮಯ್ಯನೂ ಶರಣರಿಗೆ ರಕ್ಷಣೆ ಒದಗಿಸುವ ಹೊಣೆಗಾರಿಕೆಯನ್ನು ವಹಿಸಿಕೊಳ್ಳುತ್ತಾನೆ. ಶತ್ರುಗಳು ಶಿವಶರಣರ ಮೇಲೆ ಕಾಳಗಕ್ಕೆ ನಿಲ್ಲುತ್ತಾರೆ. ಕಾದ್ರೋಳಿ ಯುದ್ಧದಲ್ಲಿ ಮಾಚಿದೇವ ಮರಣವನು ಹೊಂದಲು ಕಿನ್ನರಿ ಬೊಮ್ಮಯ್ಯ ಗಣನಾಯಕನಾಗಿ ಶೌರ್ಯದಿಂದ ಹೋರಾಟ ಮಾಡುತ್ತಾನೆ. ಕೊನೆಗೆ ಗೊಂಡಾರಣ್ಯದ ಮಧ್ಯದಲ್ಲಿರುವ ಮಹಾಮನೆಯ ಮುಂದೆ ಬಿಜ್ಜಳನ ಅಳಿಯನ ನೇತೃತ್ವದ ಸೈನ್ಯದೊಡನೆ ಕೊನೆಯ ಕಾಳಗವನ್ನು ಮಾಡುತ್ತಾನೆ. ಅಲ್ಲಿ ಇಳಿಬಾನಿನಲ್ಲಿ ಹರಿದು ಬರುತ್ತಿದ್ದ ನೀರನ್ನು ಮಹಾಮನೆಯ ಗುಹೆಯ ದ್ವಾರದಿಂದ ೩೦೦ ಅಡಿ ಎತ್ತರದಲ್ಲಿ ಭೂಮಿ ಅಗೆದು ಒಳಕ್ಕೆ ನೀರು ಹರಿಯುವಂತೆ ಮಾಡಿ ಆ ಗುಹೆಯನ್ನೇ ಜಲದುರ್ಗವನ್ನಾಗಿ ಪರಿವರ್ತಿಸುತ್ತಾನೆ. ಕೊನೆಯಲ್ಲಿ ಉಳಿದ ಶಿವಶರಣರೊಡಗೂಡಿ ಕೊನೆಯವರಿಗೂ ಕಲಿತನದಿಂದ ಹೋರಾಡಿ ವೀರಮರಣವನ್ನು ಹೊಂದುತ್ತಾನೆ. ಇಂದಿಗೂ ಆ ಹೊಳೆ ಕಿನ್ನರಿ ಬೊಮ್ಮಯ್ಯನ ಹೊಳೆಯೆಂದೇ ಪ್ರಸಿದ್ಧವಾಗಿದ್ದು ಆ ಹೊಳೆಯಿರುವ ತನಕ ಅವನ ಹೆಸರು ಉಳಿಯುತ್ತದೆ. ಕಿನ್ನರಿ ಬೊಮ್ಮಯ್ಯನ ಸಮಾಧಿಯ ಮೇಲೆ ಶೋಭಿಸುವ 'ಕಿನ್ನರಯ್ಯ' ಎಂಬ ಉಲ್ಲೇಖವಿರುವ ಶಿಲಾಶಾಸನವು ಜಗತ್ತಿಗೇ ಕಿನ್ನರಿ ಬೊಮ್ಮಯ್ಯನ ನಿರ್ಮಲ ಚರಿತ್ರೆಯನ್ನು ಸಾರಿ ಸಾರಿ ಹೇಳುತ್ತಿದೆ. ☆

**ಸಮಷ್ಟಿ ಹಿತಕ್ಕಾಗಿ ಬದುಕುವವರಲ್ಲಿ ವ್ಯಕ್ತಿಯ ಹಿತಾಸಕ್ತಿಗಳು ಗೌಣವಾಗಿ ಬಿಡುತ್ತವೆ. - ಬಿ.ಆರ್. ಮಹಾದೇವಯ್ಯ**





# ನಿತ್ಯಜೀವನದಲ್ಲಿ ಧರ್ಮದ ಅನುಷ್ಠಾನದ ಆವಶ್ಯಕತೆ

–ಸ್ವಾಮಿ ಮುಕ್ತಿದಾನಂದ *

ಭಾರತ ದೇಶವು ಸಾವಿರಾರು ವರ್ಷಗಳ ಭವ್ಯ ಸಾಂಸ್ಕೃತಿಕ, ಧಾರ್ಮಿಕ ಹಾಗೂ ಆಧ್ಯಾತ್ಮಿಕ ಪರಂಪರೆಯ ನೆಲೆವೀಡು. ಈ ದೇಶಕ್ಕೆ ಸ್ವಾತಂತ್ರ್ಯ ಲಭಿಸಿ ಆರು ದಶಕಗಳಾದರು ನಮ್ಮ ಸಂಸ್ಕೃತಿ ಮತ್ತು ಸನಾತನ ಧರ್ಮದ ಸ್ಥಿತಿ-ಗತಿಗಳು ಪ್ರಾಯೋಗಿಕವಾಗಿ, ಸಾಮಾಜಿಕವಾಗಿ ದುರ್ಬಲವಾಗುತ್ತಿರುವುದು ಗಮನಾರ್ಹ; ಅಷ್ಟೇ ಅಲ್ಲದೆ ನಮ್ಮ ಜನಸಾಮಾನ್ಯರಲ್ಲಿ ಧರ್ಮಶ್ರದ್ಧೆ ಮತ್ತು ಧರ್ಮಾನುಯಾಯಿಗಳ ಸಂಖ್ಯಾಬಲ ದಿನೇ ದಿನೇ ಕ್ಷೀಣಿಸುತ್ತಿರುವುವುದನ್ನು ಕೂಡ ನಾವು ಸ್ಪಷ್ಟವಾಗಿ ಕಾಣಬಹುದು. ಇದೊಂದು ಚಿಂತಾಜನಕ ಪರಿಸ್ಥಿತಿ.

'ಧರ್ಮವೇ ಭಾರತದ ಜೀವಾಳ. ಆಧ್ಯಾತ್ಮಿಕತೆಯೇ ಭಾರತೀಯ ಸಂಸ್ಕೃತಿಯ ಅನನ್ಯ ಹಾಗೂ ಅತ್ಯಮೂಲ್ಯ ಸಂಪತ್ತು. ನಿಮ್ಮ ಆಧ್ಯಾತ್ಮಿಕ ಸಂಪತ್ತನ್ನು ನಿರ್ಲಕ್ಷಿಸಿ, ಕಣ್ಣು ಕೋರೈಸುವ ಪಾಶ್ಚಾತ್ಯ ಭೌತಿಕ ನಾಗರಿಕತೆಯ ಬೆನ್ನು ಹತ್ತಿದಲ್ಲಿ, ಮೂರು ತಲೆಮಾರುಗಳಲ್ಲಿ ನಿಮ್ಮ ಜನಾಂಗ ನಿರ್ನಾಮವಾಗುತ್ತದೆ' ಎಂದರು ಸ್ವಾಮಿ ವಿವೇಕಾನಂದರು ಈ ಎಚ್ಚರಿಕೆಯ ಮಾತುಗಳಿಗೆ ಯುವಜನಾಂಗ ಹಿಂದಿಗಿಂತಲೂ ಇಂದು ಹೆಚ್ಚು ಸ್ಪಂದಿಸಿ ಮನಗಾಣಬೇಕಾದ ಆವಶ್ಯಕತೆ ಇದೆ.

ಸ್ವಾಮಿ ವಿವೇಕಾನಂದರು ಹೀಗೆ ಹೇಳುತ್ತಾರೆ: 'ಧರ್ಮದ ರಹಸ್ಯವಿರುವುದು ಸಿದ್ಧಾಂತಗಳಲ್ಲಲ್ಲ; ಆಚರಣೆಯಲ್ಲಿ. ಧರ್ಮವೆಂದರೆ ಬರೀ ಮಾತಲ್ಲ, ಅದು ಧಾರ್ಮಿಕ ಉಪದೇಶದ ಅನುಷ್ಠಾನ. ಒಂದು ಮಣದಷ್ಟು ಉಪದೇಶಕ್ಕಿಂತ ಒಂದು ಗುಲಗಂಜಿಯಷ್ಟು ಆಚರಣೆ ಎಷ್ಟೋ ಮೇಲು. ಹಿಂದೂಧರ್ಮದಷ್ಟು ಉದಾತ್ತ ತತ್ತ್ವಗಳನ್ನು ಹೇಳುವ ಇನ್ನೊಂದು ಧರ್ಮವಿಲ್ಲ. ಆದರೆ ಪ್ರತ್ಯಕ್ಷ ಆಚರಣೆಯಲ್ಲಿ ಹಿಂದೂಗಳಷ್ಟು ಉದಾಸೀನ ಜನಾಂಗ ಇನ್ನೊಂದಿಲ್ಲ.

ಅನುಷ್ಠಾನ ಪ್ರಧಾನವಾದ ಧರ್ಮ ಮಾತ್ರ ಒಂದು ಅಪೂರ್ವ ಜೀವಂತಶಕ್ತಿಯಾಗಿ ಉಳಿಯಬಲ್ಲದು. ವೈಯಕ್ತಿಕ ಹಾಗೂ ಸಾಮಾಜಿಕ ಬದುಕಿನಲ್ಲಿ ಸುಖ-ಶಾಂತಿ-ನೆಮ್ಮದಿಯನ್ನು ತರಬಲ್ಲದು, ಬಾಳನೌಕೆಗೆ ದಾರಿದೀಪವಾಗಬಲ್ಲದು.

ಯಾವ ಧರ್ಮದ ಅನುಯಾಯಿಗಳು ನಿತ್ಯಜೀವನದಲ್ಲಿ ಅನುಷ್ಠಾನವಿಹೀನರಾಗುತ್ತಾರೋ, ಆ ಧರ್ಮ ಕ್ರಮೇಣ ಶಿಥಿಲವಾಗುತ್ತದೆ. ಪ್ರಸಿದ್ಧ ಜೀವವಿಜ್ಞಾನಿ ಲಾಮಾರ್ಕ್ ಹೇಳುವಂತೆ 'ಬಳಕೆಯಲ್ಲಿ ಇಲ್ಲದ್ದು ತಾನಾಗಿ ನಶಿಸಿಹೋಗುತ್ತದೆ' (Disuse leads to atrophy)

ಧರ್ಮದ ಅವನತಿಗೆ ಮತ್ತೊಂದು ಮುಖ್ಯ ಕಾರಣವೆಂದರೆ ಧರ್ಮದ ತಿರುಳಾದ ಸತ್ಯ ಮತ್ತು ಪ್ರಾಮಾಣಿಕತೆಗಳ ಕೊರತೆ. ಸಾವಿರಾರು ವರ್ಷಗಳ ಆಘಾತಗಳಿಂದ ಸನಾತನ ಧರ್ಮ ಉಳಿದುಕೊಂಡು ಬಂದಿರುವುದು ನೈತಿಕ ಬಲದಿಂದ. ಯಾವಾಗ ನಾವು ಧರ್ಮವನ್ನು ಕೇವಲ ಕಂದಾಚಾರಗಳಿಗೆ ಸೀಮಿತಗೊಳಿಸಿ ನೈತಿಕತೆಗೆ ಪ್ರಾಧಾನ್ಯ ನೀಡುವುದಿಲ್ಲವೋ ಆಗ ನಿಜವಾದ ಧರ್ಮ ಹಿಮ್ಮೆಟ್ಟುತ್ತದೆ.

ಇಂತಹ ಶೋಚನೀಯ ಪರಿಸ್ಥಿತಿಯನ್ನು ನಾವಿಂದು ಎದುರಿಸುತ್ತಿದ್ದೇವೆ. ಬದುಕನ್ನು ಶ್ರೀಮಂತಗೊಳಿಸುವ, ಅದಕ್ಕೊಂದು ಅರ್ಥ ನೀಡುವ ಮೌಲ್ಯಾಧಾರಿತ ಸನಾತನ ಧರ್ಮದ ಅನುಷ್ಠಾನದ ಕೊರತೆಯ ಬರಗಾಲವನ್ನು ಯುವಜನಾಂಗ ಇದೀಗ ಎದುರಿಸುತ್ತಿದೆ. ಅನ್ಯಮತೀಯರಲ್ಲಿ ಅವರವರ ಮತದ ಬಗ್ಗೆ ಶ್ರದ್ಧೆ, ಶಿಸ್ತಿನ ಜೊತೆ ಅನುಷ್ಠಾನದ ಕಾಳಜಿಯಿದೆ. ಆದರೆ ಬಹುತೇಕ ಸನಾತನಧರ್ಮೀಯರು ಅದೇಕೋ ತಮ್ಮ ಧರ್ಮ-ಕರ್ಮಾನುಷ್ಠಾನದಲ್ಲಿ ಆ ಬಗೆಯ

* ಅಧ್ಯಕ್ಷರು, ರಾಮಕೃಷ್ಣಾಶ್ರಮ, ಮೈಸೂರು.

**ಖುಷಿ ನೀಡುವ ಅಭಿಪ್ರಾಯಕ್ಕಿಂತ ಪ್ರಾಮಾಣಿಕ ಅಭಿಪ್ರಾಯ ಬಹುಮುಖ್ಯ--ಗುರುರಾಜ ಕರ್ಜಗಿ**

ಅಚಲ ನಿಷ್ಠೆಯನ್ನು ತೋರುತ್ತಿಲ್ಲ. ಇದಕ್ಕೆ ಕಾರಣವೇನು? ಧಾರ್ಮಿಕ ಶಿಕ್ಷಣದ ಕೊರತೆ ಎನ್ನೋಣವೆ? ಅಥವಾ ತಿಳಿವಳಿಕೆಯ ಅಭಾವವೇ? ಉದಾತ್ತ ಆಧ್ಯಾತ್ಮಿಕ ಚಿಂತನೆಗಳ ಆಲಕ್ಷ್ಯವೇ? ಅಜ್ಞಾನವೇ? ಅಥವಾ ಆಚರಣೆಗೆ ತರಲು ಬೇಕಾದ ಯೋಗ್ಯ ತರಬೇಯಿಯ ಕೊರತೆಯೇ? ಸ್ವಲ್ಪ ಸಾವಧಾನದಿಂದ ಯೋಚಿಸಬೇಕಾದ ವಿಷಯವಿದು.

ವಿದ್ಯಾವಂತ ಭಾರತೀಯರೆನಿಸಿಕೊಂಡವರಲ್ಲಿ ಈ ಧರ್ಮದ ಅರಿವು ಜಾಗೃತವಾಗಿದೆಯೇ? ನಮ್ಮ ಸಂಸ್ಕೃತಿಯ ಹಿರಿಮೆಯ ಜ್ಞಾನ ಮನೆ ಮಾಡಿದೆಯೇ? ಆಧ್ಯಾತ್ಮಿಕ ಅನುಷ್ಠಾನವನ್ನು ಕುರಿತ ಚಿಂತನೆ ನಮ್ಮಲ್ಲಿ ಬೇರೂರಿದೆಯೇ? ಈ ದಿಸೆಯಲ್ಲಿ ಹಿಂದುಳಿದ, ಗ್ರಾಮಾಂತರ ಅನಕ್ಷರಸ್ಥ ಬಡ ಕುಟುಂಬಗಳಷ್ಟೇ ಏಕೆ, ಪಟ್ಟಣದ ವಿದ್ಯಾವಂತ ಯುವಜನತೆ ಕೂಡ ಯಾವುದೇ ಆಧ್ಯಾತ್ಮಿಕ ಮಾರ್ಗದರ್ಶನವಿಲ್ಲದೆ, ಆಧಾರವಿಲ್ಲದೆ, ಅವಲಂಬನೆಯಿಲ್ಲದೆ ಮುಖ್ಯವಾಹಿನಿಯಲ್ಲಿ.ಗುರುತಿಸಿಕೊಳ್ಳಲಾಗದ ಅತಂತ್ರ ಸ್ಥಿತಿಯಲ್ಲಿದ್ದಾರೆ ಎನ್ನುವುದು ತುಂಬ ವಿಷಾದಕರ.

ನಮ್ಮ ಅನುಪಮ ಸಂಸ್ಕೃತಿ ಕುರಿತಂತೆ ಅಪಾರ ಪ್ರಮಾಣದಲ್ಲಿ ವಿಫಲತೆಗಳೇ ತಾಂಡವವಾಡುತ್ತಿರುವುದನ್ನು ದೇಶದ ಎಲ್ಲೆಡೆ ಕಾಣುತ್ತಿದ್ದೇವೆ. ಈ ಸಾಂಸ್ಕೃತಿಕ ಸಂಪತ್ತನ್ನು ಜನ ಸಮುದಾಯ ಕಳೆದುಕೊಂಡು, ಅದನ್ನು ಮತ್ತೆ ಪಡೆಯಲಾಗದ ಒಂದು ಅಪಾಯದ ಅಂಚನ್ನು ತಲುಪಲಿದ್ದೇವೆ. ಮುಂದಿನ ಶತಮಾನಗಳಲ್ಲಿ ನಾವೂ ಕೂಡ ಪಾರ್ಸಿ ಜನಾಂಗದಂತೆ, ಹರಪ್ಪಾ ಮೊಹೆಂಜೊದಾರೊ ನಾಗರಿಕತೆಗಳಂತೆ ಕ್ಷೀಣಿಸಿ, ಅವಸಾನ ಹೊಂದುವ ಸಾಧ್ಯತೆಗಳಿವೆ. ಆದ್ದರಿಂದ ನಾವು ಈಗಲಾದರೂ ಎಚ್ಚೆತ್ತುಕೊಳ್ಳುವುದು ಅನಿವಾರ್ಯ; ಅತ್ಯಗತ್ಯ. ಒಂದು ವೇಳೆ ಭವಿಷ್ಯದಲ್ಲಿ ಈ ಸನಾತನ ಧರ್ಮವು ಕ್ಷೀಣಿಸಿದಲ್ಲಿ ಅಥವಾ ಶಿಥಿಲ ಹೊಂದಿದಲ್ಲಿ ವಿಶ್ವದ ಒಂದು ವಿಶಿಷ್ಟ ಧರ್ಮವು ಕಣ್ಮರೆಯಾದಂತೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಇದನ್ನು ಮನಗಂಡು, ಅಂತಹ ವಿಷಮಸ್ಥಿತಿ ತಲುಪದಂತೆ ನಾವು ಕಾರ್ಯೋನ್ಮುಖರಾಗಬೇಕು.

**ಯುವಜನತೆಯ ಹೊಣೆಗಾರಿಕೆ :**

ಧರ್ಮವಾದರೂ ಸೂರ್ಯನ ಕಿರಣದಂತೆ, ತಂಗಾಳಿಯ ತಂಪಿನಂತೆ. ಯಾವ ತಾರತಮ್ಯವಿಲ್ಲದೆ ಎಲ್ಲರಿಗೂ ಇದು ದಕ್ಕಬೇಕು. ದೇಶದ ಸಮಸ್ತ ಬಾಂಧವರಿಗೆ ಇದು ಉಪಲಬ್ಧವಾಗಬೇಕು. ಸರಿಯಾದ ಧಾರ್ಮಿಕ ಶಿಕ್ಷಣದ ಮೂಲಕ ಇದನ್ನು ಸಾಮಾನ್ಯರ ಸ್ತರಕ್ಕೊಯ್ದು, ಎಲ್ಲರಿಗೂ ಸುಲಭವಾಗಿ ಅರ್ಥವಾಗುವ ರೀತಿಯಲ್ಲಿ ಬೋಧಿಸಿ, ನಾಡ ಜನರನ್ನು ಅನುಷ್ಠಾನ ಪರರಾಗುವಂತೆ ಪ್ರೇರೇಪಿಸಬೇಕು. ಈ ಕಾರ್ಯಸೂಚಿ ಇಂದಿನ ಅತ್ಯಗತ್ಯಗಳಲ್ಲೊಂದೆನಿಸುತ್ತದೆ.

ಆಧುನಿಕ ಜೀವನದ ಅನೇಕ ಜ್ವಲಂತ ಸಮಸ್ಯೆ-ಸವಾಲುಗಳಿಗೆ ಸಮಾಧಾನ ನೀಡಬಲ್ಲ ಸಾಮರ್ಥ್ಯ ನಮ್ಮ ಪ್ರಾಚೀನ ವಿಶ್ವಮಾನ್ಯ ಉದ್ಗ್ರಂಥಗಳಿಗಿದೆ. ಸಮಗ್ರ ಜೀವನ ದೃಷ್ಟಿ, ವಿಶಾಲ ಮನೋಭಾವ ಮತ್ತು ವೈಶಿಷ್ಟ್ಯಪೂರ್ಣ ಆಧ್ಯಾತ್ಮಿಕತೆಯ ಹಿನ್ನಲೆಯನ್ನು ಗೀತೆ, ಉಪನಿಷತ್, ರಾಮಾಯಣ, ಮಹಾಭಾರತ ಮೊದಲಾದ ಮಹಾಕೃತಿಗಳಲ್ಲಿ ಸ್ಪಷ್ಟವಾಗಿ ನಾವು ಕಾಣಬಹುದು.

ಉಪನಿಷತ್ತು ಮತ್ತು ಭಗವದ್ಗೀತೆ-ಇವುಗಳ ವೈಚಾರಿಕ ಹಿನ್ನಲೆಯನ್ನು ಹೊಂದಿದ್ದು, ವಿಜ್ಞಾನ ಮತ್ತು ಆಧುನಿಕತೆಯನ್ನು ಮೇಳೈಸಿಕೊಳ್ಳಬಲ್ಲ ಪೂರ್ಣದೃಷ್ಟಿ ಹೊಂದಿರುವ, ಪ್ರಗತಿಪರವಾದ ಈ ನಮ್ಮ ಸನಾತನಧರ್ಮ ಇಡೀ ವಿಶ್ವದಲ್ಲೇ ಅನುಪಮವಾಗಿದೆ.

***ದೇವಸ್ಥಾನ ಸೇವಾಸ್ಥಾನವಾಗಲಿ ಮತ್ತು***
***ಧರ್ಮಾನುಷ್ಠಾನ ಶಿಕ್ಷಣ ಕೇಂದ್ರವಾಗಲಿ***

ನಮ್ಮ ದೇಶಗಳಲ್ಲಿರುವ ಸಾವಿರಾರು ದೇವಾಲಯಗಳು ಇತರ ಅಧ್ಯಾತ್ಮಿಕ ಸಂಸ್ಥೆಗಳಂತೆ ಪೂಜೆ ಉತ್ಸವಗಳ ಜೊತೆ ಜೊತೆಗೆ ಬಡಜನರಿಗೆ, ದೀನರಿಗೆ ಅವಶ್ಯವಾದ ಸೇವಾ ಕಾರ್ಯಕ್ರಮಗಳನ್ನು ನರನಾರಾಯಣ ಪೂಜಾ ಭಾವದಿಂದ ಹಮ್ಮಿಕೊಂಡು, ಸೇವಾಕೇಂದ್ರಗಳನ್ನಾಗಿ ಮಾರ್ಪಡಿಸಲು ಪ್ರಯತ್ನಿಸಬೇಕು ಹಾಗೂ ನಮ್ಮ ಧರ್ಮ ಮತ್ತು ಆಧ್ಯಾತ್ಮಿಕ

**ಬುದ್ಧಿಯ ಬಲವನ್ನು ಭಾರತದಲ್ಲಿ ಬೆಳೆಸಿದ ಆದ್ಯ ಪುರುಷ ಬುದ್ಧನೇ. ಕರ್ಮದ ಕತ್ತಲೆಯಲ್ಲಿ ಧರ್ಮವನ್ನು ಹುಡುಕುತ್ತಿದ್ದ ಭಾರತಕ್ಕೆ ಬುದ್ಧಿಯ ಬೆಳಕನ್ನು ನೀಡಿದ ಮಹಾದಾನಿ ಆತ. -ವಿದ್ವಾನ್ ನಾಗೇಶ ಶಾಸ್ತ್ರಿ.**





ತರಬೇತಿಯನ್ನು ಕೊಡುವ ಧರ್ಮಶಿಕ್ಷಣ ಕೇಂದ್ರಗಳಾಗಿ ಪರಿವರ್ತನೆ ಹೊಂದಬೇಕು. ಅದಕ್ಕೆ ಆಯಾಯ ಪ್ರದೇಶದ ಅಥವಾ ಸಮುದಾಯದ ಹಿರಿಯರು, ಚಿಂತಕರು, ಅರ್ಚಕರು ಅಲ್ಲಿಯ ಆಡಳಿತ ಮಂಡಳಿಯ ಜತೆ ಸಮಾಲೋಚಿಸಿ, ತಮ್ಮ ಸಹಾಯ ಹಸ್ತವನ್ನು ನೀಡಿ ಸೇವೆ ಮತ್ತು ಧರ್ಮಶಿಕ್ಷಣವನ್ನು ಜನಸಾಮಾನ್ಯರಿಗೆ ತಲುಪಿಸುವ ಕೇಂದ್ರಗಳನ್ನಾಗಿ ನಮ್ಮ ದೇವಾಲಯಗಳನ್ನು ಮಾಡಿಕೊಳ್ಳಬೇಕು.

ಸಾವಿರಾರು ಸಾಧುಸಂತರನ್ನು, ಮಹಾತ್ಮರನ್ನು ಸೃಷ್ಟಿಸಿದ ಈ ಧರ್ಮ ಉಳಿಯಬೇಕಿದ್ದರೆ, ಯೋಗ, ಪ್ರಾಣಾಯಾಮ, ಪ್ರಾರ್ಥನೆ, ಪೂಜೆ, ಜಪ, ತಪ, ಸೇವೆ, ದೀನರ ಬಗ್ಗೆ ಅನುಕಂಪ, ನೈತಿಕತೆ ಮೊದಲಾದ ಉದಾತ್ತ ಮೌಲ್ಯಗಳ ಅನುಷ್ಠಾನ ಆವಶ್ಯಕ. ಆಗ ಮಾತ್ರ ಅರ್ಥಪೂರ್ಣ ಧಾರ್ಮಿಕ ಆಚರಣೆಯು ನಿಜ ಜೀವನದ ಒಂದು ಅವಿಭಾಜ್ಯ ಅಂಗವಾಗಬಲ್ಲದು, ಅಂತಹ ಅನುಷ್ಠಾನವು ಮಾತ್ರ ಪರಿಣಾಮಕಾರಿಯಾಗಬಲ್ಲದು.

**ಅನುಷ್ಠಾನಕ್ಕಾಗಿ ಕೆಲವು ಸಲಹೆಗಳು :**

ಈ ನಿಟ್ಟಿನಲ್ಲಿ ವಿದ್ಯಾರ್ಥಿಗಳಿಗೆ, ಜನಸಾಮಾನ್ಯರು ಸುಲಭವಾದ ಶ್ಲೋಕ, ಮಂತ್ರ, ಪ್ರಾರ್ಥನೆ, ಜಪ, ಧ್ಯಾನ ಮುಂತಾದುವುಗಳ ಅಂತರಾರ್ಥವನ್ನು ಅರಿತು, ಪ್ರತಿದಿನ ಮನೆಮನೆಗಳಲ್ಲಿ ಅವನ್ನು ಆಚರಿಸುವುದರಿಂದ ಬುದ್ಧಿಗೆ ಪುಷ್ಟಿ, ಮನಸ್ಸಿಗೆ ಅಂತಃಶಕ್ತಿ ದೊರಕುತ್ತದೆ; ವಿವೇಕ ಜಾಗೃತವಾಗುತ್ತದೆ. ಸಾಮಾಜಿಕ ಪುನಶ್ಚೇತನವಾಗಿ ಶಾಂತಿ-ಸೌಹಾರ್ದ ಇರುವ ವಾತಾವರಣ ನಿರ್ಮಾಣವಾಗುತ್ತದೆ. ನಮಗೆ ಇಂದು ಬೇಕಾಗಿರುವುದು **'ಮಾನವ ಅನುಕಂಪಾಧಾರಿತ ಅರ್ಥಪೂರ್ಣ ಧರ್ಮದ ಅನುಷ್ಠಾನ'**.

ಭಗವಂತನು ನಮ್ಮ ಅಂತರ್ಯಾಮಿ ; ನಮ್ಮ ಬಾಳಿನ ಆಧಾರ, ಸರ್ವಸ್ವನೂ ಅವನೇ ಆಗಿದ್ದಾನೆ. ಭಗವಂತನ ಮಹಾತ್ಮೆಯನ್ನು ಶ್ರದ್ಧೆಯಿಂದ ತಿಳಿದು ಅವನ ಯಾವುದೇ ನಾಮ, ರೂಪ, ದೈವಿಗುಣದ ಆರಾಧನೆಯನ್ನು ಪ್ರತಿದಿನ ಮಾಡಬೇಕು.

ಧ್ಯಾನವು ಭಗವದಾರಾಧನೆಯ ಒಂದು ರೀತಿ. ಧ್ಯಾನದ ನಿಯಮಿತ ಅಭ್ಯಾಸದಿಂದ ಮನಸ್ಸು ಸಂಸ್ಕಾರಗೊಂಡು ಶುದ್ಧವಾಗುತ್ತದೆ. ಅಂತರಂಗವು ದೈವತ್ವದತ್ತ ಹರಿಯುತ್ತದೆ. ಮನಸ್ಸಿನ ಒಳಗಣ್ಣನ್ನು ತೆರೆಯಲು ಧ್ಯಾನವೇ ಹೆದ್ದಾರಿ.

ರೂಪಧ್ಯಾನವೆಂದರೆ ಭಗವಂತನ ರೂಪವನ್ನು ಕಲ್ಪಿಸಿಕೊಂಡು ಅದನ್ನೇ ನಿರಂತರ ಸ್ಮರಿಸುವ ವಿಧಾನ.

ಗುಣಧ್ಯಾನವೆಂದರೆ ಸ್ತೋತ್ರಗಳ ಮೂಲಕ ಭಗವಂತನ ಆರಾಧನೆ. ವಿಷ್ಣುಸಹಸ್ರನಾಮ, ಭಗವದ್ಗೀತೆ, ರಾಮರಕ್ಷಾ ಸ್ತೋತ್ರ ಮುಂತಾದ ಸ್ತೋತ್ರಸಾಹಿತ್ಯವನ್ನು ನಿತ್ಯವೂ ಪಾರಾಯಣ ಮಾಡಿ ಮನನ ಮಾಡಬೇಕು.

ನಾಮಜಪವೆಂದರೆ ಭಗವಂತನ ಯಾವುದೋ ಒಂದು ಹೆಸರನ್ನು ಪದೇ ಪದೇ ಉಚ್ಚರಿಸುತ್ತಾ ಅವನ ಸ್ಮರಣೆಯನ್ನು ಮನಸ್ಸಿನಲ್ಲಿಯೇ ಮಾಡುವ ಪ್ರಕ್ರಿಯೆ.

ಈ ಕೆಳಗೆ ಸೂಚಿಸಿರುವ ಧಾರ್ಮಿಕ ಅನುಷ್ಠಾನದ ಕ್ರಮವನ್ನು ಮನೆಯ ಸಂಪ್ರದಾಯದ ಜತೆ ಅಳವಡಿಸಿಕೊಂಡು ಅದನ್ನು ನಿಮ್ಮದೇ ಆದ ರೀತಿಯಲ್ಲಿ ಆಚರಿಸಬಹುದು. ಮುಖ್ಯವಾಗಿ ಬೇಕಾಗಿರುವುದೆಂದರೆ ಧರ್ಮಶ್ರದ್ಧೆ, ಆತ್ಮವಿಶ್ವಾಸ ಹಾಗೂ ಅನುಷ್ಠಾನದ ಅವಶ್ಯಕತೆಯ ಬಗ್ಗೆ ತಿಳುವಳಿಕೆ. ಆ ವಿಧಾನ ಹೀಗಿದೆ :

೧. ಎಲ್ಲರ ಒಳಿತಿಗಾಗಿ ಪ್ರಾರ್ಥನೆ. ೨. ದೇವ-ದೇವಿಯರ ಪ್ರಾರ್ಥನೆ. ೩. ತೇಜಸ್ಸು, ಓಜಸ್ಸು ಮತ್ತು ಆತ್ಮಶಕ್ತಿ ಕುರಿತ ಪ್ರಾರ್ಥನೆ. ೪. ಭಾವಪೂರಿತವಾದ ದೇವರ ನಾಮಗಳು. ೫. ಬುದ್ಧಿಯ ಜಾಗೃತಿಗಾಗಿ ಗಾಯತ್ರಿ ಉಪಾಸನೆ. ೬. ಇಷ್ಟ ದೇವತೆಯ ನಾಮಸ್ಮರಣೆ.

ಸರ್ವರ ಹಿತಕ್ಕಾಗಿ, ಧಾರ್ಮಿಕ ಪ್ರಜ್ಞೆಯ ವಿಕಾಸಕ್ಕಾಗಿ, ವ್ಯಕ್ತಿತ್ವದ ಬೆಳವಣಿಗೆಗಾಗಿ, ಏಕಾಗ್ರತಾಶಕ್ತಿಯ ಪ್ರಾಪ್ತಿಗಾಗಿ, ಸಕಲ ಸಂಕಷ್ಟಗಳ ನಿವಾರಣೆಗಾಗಿ ಮತ್ತು ಶಕ್ತಿ-ಯಶಸ್ಸಿನ ಪ್ರಾಪ್ತಿಗಾಗಿ ಜಾತಿ-ಮತ-ಕುಲ-ಗೋತ್ರಗಳ ಭೇದವಿಲ್ಲದೆ ಸಮಸ್ತ ದೇಶಬಾಂಧವರೂ ಎಲ್ಲ ಸನ್ನಿವೇಶಗಳಲ್ಲೂ ಸುಲಭ

**ಧ್ಯೇಯ ರೋಚಕವಾದ ವೃತ್ತಿಯೇ ಧ್ಯಾನ. ಇನ್ನೊಂದು ವೃತ್ತಿಯ ಸಾಂಕರ್ಯವಿಲ್ಲದೆ ಒಂದೇ ಚಿತ್ತವೃತ್ತಿಯು ನಿಶ್ಚಲವಾಗಿ ನಿಂತರೇ ಅದು ಧ್ಯಾನ. - ಕೆ.ಪಿ. ಶಂಕರಶಾಸ್ತ್ರಿ.**

ಸರಳ ರೀತಿಯಲ್ಲಿ ಆಚರಿಸಬಹುದಾದ ಪೂಜಾಪದ್ಧತಿಯನ್ನು ಪರಿಚಯಿಸುವುದು ಇಂದಿನ ತುರ್ತು ಅವಶ್ಯಕತೆಯಾಗಿದೆ.

ಆದರೆ ಭಗವಂತನ ನಿಜವಾದ ಆರಾಧನೆಯೆಂದರೆ ಅವನ ಮಕ್ಕಳ ಸೇವೆ ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ. ಅವರು ಕಷ್ಟ ದುಃಖದಿಂದ ಬಳಲುತ್ತಿರುವವರಿಗೆ 'ಶಿವಭಾವದಲ್ಲಿ ಜೀವ ಸೇವೆ' ಎಂಬ ನಿಃಸ್ವಾರ್ಥಭಾವದಿಂದ ಸೇವೆ ಮಾಡಬೇಕು ಎಂದು ಎಲ್ಲರಿಗೂ ಕರೆ ಕೊಟ್ಟಿದ್ದಾರೆ.

**ಈ ಸ್ಫೂರ್ತಿವಾಣಿಯನ್ನು ಒಮ್ಮೆ ಧ್ಯಾನಿಸಿ :**

ಈ ನಿಟ್ಟಿನಲ್ಲಿ ಸ್ವಾಮಿ ವಿವೇಕಾನಂದರ ತೂರ್ಯ ವಾಣಿಗೆ ಒಮ್ಮೆ ಕಿವಿಗೊಡೋಣ: 'ಪ್ರತಿಯೊಂದು ರಾಷ್ಟ್ರವೂ ನಿರ್ವಹಿಸಬೇಕಾದ ದೈವದತ್ತ ಕಾರ್ಯವೊಂದುಂಟು; ನೀಡ ಬೇಕಾದ-ಸಂದೇಶವೊಂದುಂಟು; ಪೂರೈಸಬೇಕಾದ ಜೀವನ ಧ್ಯೇಯವೊಂದುಂಟು. ಹೀಗಾಗಿ ನಮ್ಮ ಜನಾಂಗಕ್ಕೊಂದು ನಿಗದಿಯಾಗಿರುವ ಒಂದು ಆಧ್ಯಾತ್ಮಿಕ ಹೊಣೆಗಾರಿಕೆ ಇದೆ ಯೆಂಬುದನ್ನು ನಾವು ಮನಗಾಣಬೇಕು.

'ಭಗವಂತನ ಯೋಜನೆಯಂತೆ ನಾವು ಹಿಂದೂಗಳು ಅತ್ಯಂತ ಹೊಣೆಗಾರಿಕೆಯ ಸ್ಥಾನದಲ್ಲಿ ನಿಂತಿದ್ದೇವೆ. ಪಾಶ್ಚಾತ್ಯ ರಾಷ್ಟ್ರಗಳು ಆಧ್ಯಾತ್ಮದ ನೆರವಿಗಾಗಿ ನಮ್ಮ ಕಡೆಗೆ ಧಾವಿಸುತ್ತಿವೆ. ಹೀಗಾಗಿ ಮಾನವನ ಬದುಕಿನ ಗೊತ್ತುಗುರಿಗಳನ್ನು ಪ್ರಪಂಚದ ಜನರಿಗೆ ತಿಳಿಸಿಕೊಡುವ ನೈತಿಕ ಹೊಣೆಗಾರಿಕೆ ಭಾರತದ ಮಕ್ಕಳಾದ ನಮ್ಮ ಹೆಗಲಿಗೇ ಬಂದಿದೆ. ಇಡೀ ಪ್ರಪಂಚವನ್ನು ಭಾರತದ ಆಧ್ಯಾತ್ಮಿಕತೆ ಜಯಿಸಬೇಕೆಂಬುದೇ ನನ್ನ ಏಕಮಾತ್ರ ಬಯಕೆ'.

**ಸಂಕಲ್ಪ :**

ಸ್ವಾಮಿವಿವೇಕಾನಂದರು ಭಾರತವು ಧರ್ಮ ಮತ್ತು ಆಧ್ಯಾತಿಕತೆಗಳ ತೌರುರು ಎಂಬುದನ್ನು ಜಗತ್ತಿಗೆ ತೋರಿಸು ವುದರ ಮೂಲಕ ಜನಮಾನಸದಲ್ಲಿ ಅತಿ ಪ್ರಖರವಾದ ಆತ್ಮಗೌರವವನ್ನು ಹೊಡೆದೆಬ್ಬಿಸಿದ್ದಾರೆ. ಅಷ್ಟೇ ಅಲ್ಲ ಜನರ ಹೃದಯಗಳಿಗೆ ಸ್ಫೂರ್ತಿ, ಉತ್ಸಾಹಗಳನ್ನು ಎರೆದು ನಮ್ಮ ಸಾಂಸ್ಕೃತಿಕ ಸಂಪತ್ತನ್ನು ಕಾಪಾಡಿಕೊಳ್ಳಲು ಕಳಕಳಿಯ ಕರೆಯನ್ನಿತ್ತಿದ್ದಾರೆ. ಸ್ವಾಮಿ ವಿವೇಕಾನಂದರ ಜೀವನದರ್ಶನ ಹಾಗೂ ಜೀವನೋದ್ದೇಶಗಳಿಗೆ ನಾವು ನಿಷ್ಠರಾಗಿರಬೇಕಾದರೆ, ರಾಷ್ಟ್ರಪ್ರಜ್ಞೆಯನ್ನು ಮತ್ತೆ ತೇಜಸ್ವಿಯಾಗಿರುವ ಸಂಕಲ್ಪವನ್ನು ಮಾಡಬೇಕು.

**ಪರಮಪುರುಷಾರ್ಥ :**

ನಮ್ಮ ರಾಷ್ಟ್ರ ಮಾತ್ರ ಅಲ್ಲ, ಮಾನವಕೋಟಿಯನ್ನೇ ಉದ್ಧಾರಗೊಳಿಸುವಷ್ಟು ಚೈತನ್ಯವನ್ನುಳ್ಳ ಜೀವನಾದರ್ಶಗಳು ನಮ್ಮ ಆಧ್ಯಾತ್ಮಿಕ ಸಂಪತ್ತಿನಲ್ಲಿವೆ. ಇಂತಹ ಉದಾತ್ತತೆಯನ್ನು ಸಾಕಾರಗೊಳಿಸುವಲ್ಲಿ ನಮ್ಮ ಎಲ್ಲ ಶಕ್ತಿಸಾಹಸಗಳನ್ನೂ ಮುಡುಪಾಗಿಡುವುದಕ್ಕಿಂತ ಹೆಚ್ಚಿನ ಪುರುಷಾರ್ಥ ಮತ್ತಾವುದಿದೆ? ಜೀವನ ಸಾರ್ಥಕ್ಯ ಹಾಗೂ ಪರಿಪೂರ್ಣತೆ ಗಳನ್ನು ತಂದುಕೊಡುವಂತಹ ಈ ಬಗೆಯ ನಿಲುವಿಗಿಂತ ಮಿಗಿಲದ ಮಹತ್ಕಾರ್ಯ ತಾನೆ ಬೇರಾವುದಿದೆ?

ನಾವು ಧನಗ್ರಾಹಿ ಓಟದ ಜೀವನದ ಒತ್ತಡದಲ್ಲಿ ಸಿಲುಕಿದ್ದೇವೆ. ಪಾಶ್ಚಿಮಾತ್ಯ ಕೊಳ್ಳುಬಾಕ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿದ್ದೇವೆ. ಮನೋವೈಕಲ್ಯತೆಗೆ ಸಿಲುಕಿ ಕ್ಷಣಿಕ ಮನೋರಂಜನೆಯನ್ನೇ ನಿಜವಾದ ಸಂತೋಷ ವೆಂದು ಭ್ರಮಿಸಿದ್ದೇವೆ. ನಿಜಧರ್ಮದ ಒಳಮರ್ಮವನ್ನು ನಾವು ತಿಳಿದುಕೊಂಡಿಲ್ಲ. ಧರ್ಮವು ಚೇತೋಹಾರಿ ಎಂದು ತಿಳಿದುಕೊಂಡಿಲ್ಲ. ನಮ್ಮದು ಸಮಾಜಮುಖಿಯಲ್ಲದ ಸ್ವಾರ್ಥಪರ ಬದುಕು. ಇಂತಹ ಬದುಕಿನ ಜಾಡ್ಯವನ್ನು ಒಮ್ಮೆ ಕೊಡವಿಕೊಳ್ಳಬೇಕು. ಅದರ ಬಗ್ಗೆ ಕ್ಷಣಕಾಲ ಯೋಚಿಸಿ ನೋಡಬೇಕು. ☆

*ಲೋಕಗುರುಕೃಪೆಯಿರಲಿ; ಲೋಕಕವಿ ಕೃಪೆ ಬರಲಿ;*
*ಲೋಕ ಹೃದಯದ ಬಯಕೆಯಾಶೀರ್ವಾದ*
*ವೈತರಲಿ;*
*ಮಣಿದಿರಲಿ ಮುಡಿ; ಮತ್ತೆ ಮುನಿದಿರಲಿ ಶೌರ್ಯ!*
*ಮತ್ತೆ*
*ಮಡಿಯಾಗಿರಲಿ ಬಾಳ್ವೆ; ಜಯಿಸುವೆ ರಸತಪಸ್ಯೆ;*
*ದೊರೆನೊಸಗೆ ಚಿರಶಾಂತಿ; ಸಿರಿಗನ್ನಡಂ ಗೆಲ್ಗೆ !*
–ಕುವೆಂಪು

ಕೆಲವರಿಗೆ ಪಾಂಡಿತ್ಯವಿರುತ್ತೆ, ಅದನ್ನು ಜನರಿಗೆ ಮುಟ್ಟಿಸೋದು ಬರಲ್ಲ. ಕಲಿಯುವುದರಲ್ಲಿ ನಿಪುಣರಾದವರು ಕಲಿಸುವುದರಲ್ಲಿ ಗಟ್ಟಿಗರಲ್ಲ. ಮಾತಾಡುವವರು ಮಾಡಿತೋರಿಸಲಾರರು. - ಡಾ|| ಬಸವರಾಜ ನೆಲ್ಲೀಸರ.





## ಸಸ್ಯಸಂಜೀವಿನಿ
## ಅರ್ಜುನನಂತೆ ಇರುವ ಅರ್ಜುನ ವೃಕ್ಷ *

–ಡಾ|| ಶೈಲೇಶ್ ಎಂ.ಡಿ.

**ಹೇ**ಗೆ ಅರ್ಜುನನು ತನ್ನ ಬಿಲ್ಲು ವಿದ್ಯೆಯಿಂದ ಯುದ್ಧ ದಲ್ಲಿ ಹೋರಾಡಿ ಜಯವನ್ನು ಪಡೆದನೋ, ಹಾಗೆಯೇ ಅರ್ಜುನನಂತೆ ಇರುವ ಅರ್ಜುನ ವೃಕ್ಷವು ತನ್ನ ಔಷಧ ಗುಣಗಳಿಂದ ರೋಗಗಳ ವಿರುದ್ಧ ಹೋರಾಡಿ ಜಯ ವನ್ನು ಗಳಿಸಿದೆ. ಅರ್ಜುನನ ನೆನಪಿಗಾಗಿಯೋ ಏನೋ ಈ ದ್ರವ್ಯಕ್ಕೆ 'ಅರ್ಜುನವೃಕ್ಷ' ಎಂದು ಹೆಸರಿಟ್ಟಿರಬಹುದು. ಅರ್ಜುನವೃಕ್ಷದ ಬಗ್ಗೆ ಅರಿಯದವರು ಅದನ್ನು ಸೌದೆಗಾಗಿ ಮಾತ್ರ ಉಪಯೋಗಿಸುತ್ತಿದ್ದರು. ಆದರೆ ಇದರ ಚೆಕ್ಕೆಯು ಅದ್ಭುತವಾದ ಹೃದಯ ರಸಾಯನ. ಬೃಹತ್ ಸಂಹಿತೆಯಲ್ಲಿ ಈ ದ್ರವ್ಯವನ್ನು ರಕ್ತಪಿತ್ತ, ಮೂಲವ್ಯಾಧಿ, ಕುಷ್ಠ, ಪ್ರಮೇಹ, ಮೂತ್ರಾಘಾತ ಮತ್ತು ವ್ರಣರೋಗಗಳಿಗೆ ಉಪಯೋಗಿಸ ಬಹುದಾಗಿದೆ ಎಂದು ವಿವರಿಸಲಾಗಿದೆ. ಆದರೆ ಇದನ್ನು ಹೃದಯರೋಗಕ್ಕೆ ಉಪಯೋಗಿಸುವುದರ ಬಗ್ಗೆ ಬೃಹತ್ ಸಂಹಿತೆಯಲ್ಲಿ ಉಲ್ಲೇಖವಿಲ್ಲ. ಚಕ್ರಪಾಣಿ, ವೃಂದ, ಶೋಡಲ ಇದರ ಹೃದಯ ಸಂಬಂಧಿ ಉಪಯೋಗದ ಬಗ್ಗೆ ವಿವರಿಸಿದ್ದಾರೆ.

**ಬಹುಭಾಷಾ ಹೆಸರುಗಳು :** ಕನ್ನಡ –ಮತ್ತೀಮರ, ಹೊಳೆಮತ್ತಿ, ಸಂಸ್ಕೃತ –ಅರ್ಜುನ, ತುಳು–ಸುದೆ ಮರುವ, ಹಿಂದಿ –ಅರ್ಜುನ್, ಇಂಗ್ಲಿಷ್–ಅರ್ಜುನ.

**ಪರ್ಯಾಯ ಪದಗಳು :** ಅರ್ಜುನ, ನದೀಸರ್ಜ, ಕಕುಭ, ವೀರವೃಕ್ಷ, ಧನಂಜಯ, ಪಾರ್ಥ, ಗೌರ. ಸಾಮಾನ್ಯವಾಗಿ ನದಿಯ ದಡಗಳಲ್ಲಿ ಮತ್ತು ಸರ್ಜವೃಕ್ಷಕ್ಕೆ ಹೋಲುವುದರಿಂದಲೇ ಈ ವೃಕ್ಷವನ್ನು 'ನದೀಸರ್ಜ' ಎಂದು ಕರೆಯುತ್ತಾರೆ.

**ದ್ರವ್ಯದ ವರ್ಣನೆ :** ಅರ್ಜುನವೃಕ್ಷವು ೨೦–೨೬ ಮೀಟರ್ ನಷ್ಟು ಎತ್ತರಕ್ಕೆ ಬೆಳೆಯುವ ಬೃಹತ್‌ಗಾತ್ರದ ಮರ. ಮರದ ಮೋಟು(ಕಾಂಡ) ಹೊರಗೆ ನೇರ, ಮೃದು ಬಿಳಿ ಛಾಯೆ ಯಿಂದ ಕೂಡಿದ್ದು, ಒಳಗೆ ದಪ್ಪವಾಗಿ ನಸುಗೆಂಪು ಬಣ್ಣದಿಂದ ಕೂಡಿದೆ. ಈ ದ್ರವ್ಯವು ೩ರಿಂದ ೬ಸೆಂ.ಮೀ. ಉದ್ದದ ಅಂಡಾಕಾರದ ಎಲೆಗಳನ್ನು ಹೊಂದಿದೆ. ಹೂವುಗಳು ಚಿಕ್ಕ ದಾಗಿದ್ದು, ಹಳದಿಬಣ್ಣದಿಂದ ಕೂಡಿದೆ. ಈ ದ್ರವ್ಯವು ೨–೫ ಸೆಂ.ಮೀ. ಗಳಷ್ಟು ಉದ್ದವಾಗಿರುವ ಹಣ್ಣುಗಳು ದಾರೆಹುಳಿಗೆ ಹೋಲುತ್ತವೆ. ಈ ದ್ರವ್ಯದ ಹೂವನ್ನು ಮಾರ್ಚ್–ಜೂನ್ ತಿಂಗಳಿನಲ್ಲಿ, ಹಣ್ಣನ್ನು ಸೆಪ್ಟೆಂಬರ್–ನವೆಂಬರ್ ತಿಂಗಳಿನಲ್ಲಿ ಬಿಡುತ್ತದೆ. ತೊಗಟೆಯನ್ನು ಔಷಧಕ್ಕೆ ಉಪಯೋಗಿಸಲ್ಪಡುವ ಈ ದ್ರವ್ಯವು ಭಾರತದ ಎಲ್ಲ ಪ್ರದೇಶಗಳಲ್ಲಿ ಹೆಚ್ಚಾಗಿ ಹಿಮಾಲಯ, ಬಂಗಾಲ, ಬಿಹಾರ, ಮಧ್ಯಪ್ರದೇಶ ಮುಂತಾದ ಪ್ರದೇಶಗಳಲ್ಲಿ ಕಂಡುಬರುತ್ತದೆ.

**ವಿಧಗಳು :** ಈ ದ್ರವ್ಯದಲ್ಲಿ ಎರಡು ವಿಧಗಳಿವೆ. ಅವು ೧. ಬಿಳಿ ಅರ್ಜುನ ೨. ಕಪ್ಪು ಅರ್ಜುನ. ಸಸ್ಯಶಾಸ್ತ್ರದಲ್ಲಿ ಎರಡು ಬಗೆಗಳಿವೆ ಅವು 1.Terminalia arjuna 2. Terminalia alata.

**ಉಪಯುಕ್ತ ಅಂಗಗಳು :** ತೊಗಟೆ.

**ದ್ರವ್ಯದ ಗುಣಧರ್ಮಗಳು:-**

ರಸ : ಕಷಾಯ. ಗುಣ : ರೂಕ್ಷ, ಲಘು
ವೀರ್ಯ : ಶೀತ ವಿಪಾಕ : ಕಟು
ಕರ್ಮ : ಕಫಪಿತ್ತಹರ, ಉದರ್ದಪ್ರಶಮನ, ಹೃದ್ಯ

*'ಅರ್ಜುನಃ ತುವರಃ ಶೀತೋ ಜಯೇತ್‌ಪಿತ್ತಕಫವ್ರಣಾನ್।*
*ಮೇದೋಮೇಹಾಸ್ರಹೃದ್ರೋಗ ಸ್ವೇದಭಗ್ನಕ್ಷತಕ್ಷಯಾನ್॥'*
(ಭಾವಪ್ರಕಾಶ)

ಎಂದರೆ ಅರ್ಜುನವೃಕ್ಷವು ಕಷಾಯ ರಸದಿಂದ ಕೂಡಿದೆ, ಶೀತಗುಣದಿಂದ ಕೂಡಿದೆ, ಪಿತ್ತಕಫಹರವಾಗಿದೆ. ವ್ರಣ, ಮೇದೋರೋಗ, ಮೇಹ, ಹೃದಯರೋಗ, ಭಗ್ನ, ಕ್ಷತ, ಕ್ಷಯ ಮುಂತಾದ ರೋಗಕ್ಕೆ ಒಳ್ಳೆಯದು.

**ಔಷಧಿ ಪ್ರಮಾಣ :** ಚೂರ್ಣ– ೩–೬ ಗ್ರಾಂ. ರಸ– ೧೨–೨೪ ಮಿ.ಲೀ. ಕಷಾಯ– ೫೦–೧೦೦ ಮಿ.ಲೀ.

**ಔಷಧೀಯ ಯೋಗಗಳು :** ಅರ್ಜುನಾರಿಷ್ಠ, ಅರ್ಜುನಘೃತ, ಪಾರ್ಥಾದ್ಯಾರಿಷ್ಟ, ಅಶ್ವಗಂಧಾರಿಷ್ಟ, ಪುಷ್ಯಾನುಗ ಚೂರ್ಣ,

* ಮೂಡಬಿದರೆ.

ಧರ್ಮಾಚರಣೆಗೆ ಧೈರ್ಯವೇ ಆಧಾರ. ಚಿತ್ತ ಧೈರ್ಯವಿಲ್ಲದವನು, ಸದ್ಧರ್ಮವನ್ನು ಕಾಪಾಡಿಕೊಂಡು ಬರಲು ಸಮರ್ಥನಾಗಲಾರನು. - ವಿದ್ವಾನ್ ಎನ್. ವೆಂಕಟೇಶಶಾಸ್ತ್ರಿ

**ಔಷಧೀಯ ಉಪಯೋಗಗಳು :**

* ಅರ್ಜುನ ಚೆಕ್ಕೆಯ ಪುಡಿಯನ್ನು ತುಪ್ಪ, ಹಾಲು ಅಥವಾ ಬೆಲ್ಲ ನೀರಿನೊಂದಿಗೆ ಸೇವಿಸುವುದರಿಂದ ಹೃದಯರೋಗ ನಿವಾರಣೆಯಾಗಿ, ಆಯುಷ್ಯವು ವೃದ್ಧಿಸುವುದು.
* ಅರ್ಜುನ ಚೆಕ್ಕೆಯ ಪುಡಿಯನ್ನು ಆಡುಸೋಗೆ ರಸದೊಂದಿಗೆ ಬೆರೆಸಿ ಅದಕ್ಕೆ ತುಪ್ಪ, ಜೇನು ಮತ್ತು ಕಲ್ಲುಸಕ್ಕರೆ ಮಿಶ್ರಣ ಮಾಡಿ ಕಲಸಿ ಕುಡಿಯುವುದರಿಂದ ಕೆಮ್ಮು, ಕ್ಷಯ ರೋಗವು ನಿವಾರಣೆಯಾಗುತ್ತದೆ.
* ಅರ್ಜುನ ಚೆಕ್ಕೆ ಮತ್ತು ಶ್ರೀಗಂಧದಿಂದ ತಯಾರಿಸಿದ ಕಷಾಯ ಸೇವನೆಯಿಂದ ಶುಕ್ರಮೇಹವು ಕಡಿಮೆಯಾಗುತ್ತದೆ.
* ಅರ್ಜುನ ಚೆಕ್ಕೆಯ ಲೇಪವನ್ನು ಜೇನಿನೊಂದಿಗೆ ಬೆರೆಸಿ ಚರ್ಮಕ್ಕೆ ಹಚ್ಚುವುದರಿಂದ ಚರ್ಮರೋಗ ನಿವಾರಣೆ.
* ಅರ್ಜುನ ಚೆಕ್ಕೆಯ ಪುಡಿಯನ್ನು ಹಾಲು ಮತ್ತು ತುಪ್ಪದಲ್ಲಿ ಸೇವಿಸುವುದರಿಂದ ಮೂಳೆಯ ಮುರಿತದಿಂದ ಬಳಲುತ್ತಿರುವವರಿಗೆ ಒಳ್ಳೆಯದು.
* ಕದಂಬ, ಅರ್ಜುನ, ಕಹಿಬೇವು, ಪಾಟಲೀ, ಹಿಪ್ಪಾಲಿ ಮತ್ತು ಎಕ್ಕೆ ಇವುಗಳ ಎಲೆಗಳನ್ನು ಅರೆದು ಗಾಯಕ್ಕೆ ಲೇಪಿಸುವುದರಿಂದ ಗಾಯವು ನಿವಾರಣೆಯಾಗುತ್ತದೆ.
* ಆಡುಸೋಗೆ, ಅರ್ಜುನ, ಯವಾಸ(ಬಳ್ಳಿ ತುರುಚಿ), ಕಹಿಬೇವು ಇವುಗಳ ಕಷಾಯ ಕುಡಿಯುವುದರಿಂದ ಮೂಲವ್ಯಾಧಿ ರೋಗದಿಂದ ಬಳಲುತ್ತಿರುವವರಿಗೆ ಒಳ್ಳೆಯದು.
* ಕಗ್ಗಲಿಮರ, ಕಕ್ಕೆಕಾಯಿ ಮತ್ತು ಅರ್ಜುನವನ್ನು ಸ್ನಾನಕ್ಕೆ ಮತ್ತು ಸೇವಿಸಲು ಉಪಯೋಗಿಸಿದರೆ ಕುಷ್ಠರೋಗವು ನಿವಾರಣೆಯಾಗುತ್ತದೆ.
* ಅರ್ಜುನ ಚೆಕ್ಕೆಯ ಪುಡಿಯನ್ನು ಜೇನಿನೊಂದಿಗೆ ಬೆರೆಸಿ ಹಾಲಿನೊಂದಿಗೆ ಸೇವಿಸುವುದರಿಂದ ರಕ್ತಾತಿಸಾರವು ನಿವಾರಣೆಯಾಗುತ್ತದೆ.
* ಅರ್ಜುನ ಚೆಕ್ಕೆಯ ಕಷಾಯವನ್ನು ಹಾಲಿನೊಂದಿಗೆ ಸೇವಿಸುವುದರಿಂದ ಹೃದಯರೋಗವು ಕಡಿಮೆಯಾಗಿ ಹೃದಯದ ಕಾರ್ಯವು ಸರಾಗವಾಗಿ ನಡೆಯುತ್ತದೆ.
* ಅರ್ಜುನವೃಕ್ಷದ ತೊಗಟೆಯ ಕಷಾಯದಿಂದ ದಿನಾಲೂ ೫-೬ಬಾರಿ ಬಾಯಿ ಮುಕ್ಕಳಿಸುವುದರಿಂದ ವಸಡುಗಳ ಊತ ಕಡಿಮೆಯಾಗುತ್ತದೆ. * ಅರ್ಜುನವೃಕ್ಷದ ತೊಗಟೆಯ ಕಷಾಯಕ್ಕೆ ಕಲ್ಲುಸಕ್ಕರೆ ಪುಡಿ ಮತ್ತು ಜೇನುತುಪ್ಪ ಬೆರೆಸಿ ಕುಡಿಯುವುದರಿಂದ ಶ್ವೇತಪ್ರದರ ಮತ್ತು ರಕ್ತಪ್ರದರ ನಿವಾರಣೆಯಾಗುತ್ತದೆ. ☆

## ಶ್ರೀ ಕೆ.ಎಸ್. ತೀರ್ಥಪ್ಪ



ಹಾಸನ ಜಿಲ್ಲೆ, ಬೇಲೂರು ತಾಲ್ಲೂಕು, ಬಿಕ್ಕೋಡು ಹೋಬಳಿ, ಕೆಸಗೋಡು ಗ್ರಾಮದ ಲಿಂ. ಕೆ.ಪಿ. ಶಿವೇಗೌಡ ಇವರ ಮಗ ಶ್ರೀ ಕೆ.ಎಸ್. ತೀರ್ಥಪ್ಪ ಇವರು ಹಿಂದಿನಿಂದಲೂ ಶ್ರೀ ಸಿದ್ಧಗಂಗಾಮಠದ ಸಂಪರ್ಕವಿಟ್ಟುಕೊಂಡು ಬಂದಿರುತ್ತಾರೆ. ಶ್ರೀಯುತರ ವೃತ್ತಿ ವ್ಯವಸಾಯ, ಜೊತೆಗೆ ಸಾಮಾಜಿಕ ಕಾರ್ಯಕರ್ತರಾಗಿ ವೃತ್ತಿಯೊಂದಿಗೆ ಬೆರೆತಿರುತ್ತಾರೆ.

ಶ್ರೀಯುತರು ತಮ್ಮ ಕೆಲಸ ಕಾರ್ಯಗಳ ಜೊತೆಯಲ್ಲಿ ಶ್ರೀಮಠಕ್ಕೆ ಕಿಂಚಿತ್ ಸೇವೆ ಸಲ್ಲಿಸುವ ದಿಶೆಯಲ್ಲಿ ಪ್ರತಿವರ್ಷದಂತೆ ಈ ವರ್ಷವೂ ಕೂಡ ಶ್ರೀಮಠದ ವತಿಯಿಂದ ಪ್ರಕಟವಾಗುತ್ತಿರುವ ಸಿದ್ಧಗಂಗಾ ಮಾಸಪತ್ರಿಕೆಗೆ **ಆಲೂರು** ತಾಲ್ಲೂಕಿನ ಹೆದ್ದುರ್ಗ, ಹುಲ್ಲಹಳ್ಳಿ, ಕೆರೆಹಳ್ಳಿ, ಸಂಕಲಾಪುರ, ಕಡದರಹಳ್ಳಿ, ಬೆಳಮೆ, ಚೆನ್ನಹಳ್ಳಿ, **ಸಕಲೇಶಪುರ** ತಾಲ್ಲೂಕು ಮಾಸುವಳ್ಳಿ, ಕಿರುವಾಲೆ, ಹೆಬ್ಬಹಳ್ಳಿ, **ಬೇಲೂರು ತಾಲ್ಲೂಕಿನ** ಮಗಸಾವರ, ದಾಸಗೊಂಡನಹಳ್ಳಿ, ಅಡಗೂರು, ಗೋಣಿಸೋಮನಹಳ್ಳಿ, ಹಳೇಬೀಡು, ಕೌರಿ, ಈಚಲಹಳ್ಳಿ, ಇರಕಲಹಳ್ಳಿ, ರಣಘಟ್ಟ, ಹೀರೆಕೊಲೆ, ಪಡುವಳ್ಳು, ಬಂದಳ್ಳಿ ವೆಂಕಿಪೇಟೆ, ಚಿಕ್ಕಬಿಕ್ಕೋಡು, ಹುಸ್ಕೂರು, ಕೆಸಗೋಡು, ಬಿಕ್ಕೋಡು, ದೊಡ್ಡಿಹಳ್ಳಿ, ಗುಡ್ಡದಚನ್ನಹಳ್ಳಿ, ವಾಟವಳೆ, ಸಿಂಗರವಳ್ಳಿ, ಗುಮ್ಮನಹಳ್ಳಿ, ಕೋಗಿಲ್ಮನೆ, ತಾರಿಮರ, **ಹಾಸನ** ತಾಲ್ಲೂಕಿನ ಶೆಟ್ಟಿಹಳ್ಳಿ ಕುಶಾವರ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕಾಲುನಡಿಗೆಯಲ್ಲಿ ಸಂಚರಿಸಿ ಪತ್ರಿಕೆಗೆ ನೂರಕ್ಕೂ ಅಧಿಕ ಸಂಖ್ಯೆಯ ಸದಸ್ಯರನ್ನು ನೊಂದಾಯಿಸಿರುತ್ತಾರೆ. ಇವರ ಸೇವೆಯನ್ನು ಹೃತ್ಪೂರ್ವಕವಾಗಿ ಸ್ಮರಿಸುತ್ತಾ 'ಸಿದ್ಧಗಂಗಾ' ಪತ್ರಿಕಾ ಬಳಗ ಅಭಿನಂದಿಸುತ್ತದೆ.

ಅಧ್ಯಾಪಕರಲ್ಲಿ ಮತ್ತು ವಿದ್ಯಾರ್ಥಿಗಳಲ್ಲಿ ವೈಜ್ಞಾನಿಕ ಮನೋಭಾವವನ್ನು ಬೆಳೆಸುವುದು ಯಾವುದೇ ಶಿಕ್ಷಣ ಕ್ರಮದ ಮುಖ್ಯ ಉದ್ದೇಶವಾಗಿರಬೇಕು. - ಡಾ.ಎಚ್. ನರಸಿಂಹಯ್ಯ.





# ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿ

-ಕೋ.ರಂ. ಬಸವರಾಜು *

*ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ*
*ಹರದ ಕುಳ್ಳಿರ್ದ ನಮ್ಮ ಮಹದೇವಸೆಟ್ಟಿ*
*ಒಮ್ಮನವಾದಡೆ ಒಡನೆ ನುಡಿವನು*
*ಇಮ್ಮನವಾದಡೆ ನುಡಿಯನು*
*ಕಾಣೆಯ ಸೋಲ ಅರ್ಧಗಾಣೆಯ ಗೆಲ್ಲ*
*ಜಾಣನೋಡವ್ವಾ ನಮ್ಮ ಕೂಡಲಸಂಗಮದೇವ (ಬ.ಷ.ವ. ೧೧೫)*

ಆಪ್ತಕಾಮನಾದ ಕೂಡಲಸಂಗಮದೇವ (ಪರಶಿವ) ಈ ಧರಣಿಯ ಮೇಲೊಂದು ದೊಡ್ಡ ಅಂಗಡಿಯನ್ನಿಟ್ಟಿದ್ದಾನೆ. ಈ ಅಂಗಡಿಯಲ್ಲಿ ನಡೆಯುವುದು ಸೃಷ್ಟ್ಯಾದಿ ಲೀಲಾರೂಪ ವ್ಯಾಪಾರ. ಲೀಲೆಯೆಂದರೆ ಶಿವನಿಗೆ ಯಾವ ಪ್ರಯೋಜನವೂ ಇಲ್ಲದ ಅನಾಯಾಸವಾದ ಕ್ರೀಡೆ. ತನ್ನ ವಿನೋದಕ್ಕಾಗಿ ತಾನೇ ಮಾಡುವ ಸೃಷ್ಟಿಸ್ಥಿತಿಲಯ ತಿರೋಧಾನ ಅನುಗ್ರಹವೆಂಬ ಪಂಚವಿಧ ವ್ಯಾಪಾರವೇ ಲೀಲೆ. 'ಪ್ರಯೋಜನಮನುದ್ದಿಶ್ಯ ನಮಂದೋಽಪಿ ಪ್ರವರ್ತತೇ' ಪ್ರಯೋಜನವಿಲ್ಲದಿದ್ದರೆ ಯಾವ ದಡ್ಡನೂ ಕೂಡ ಯಾವುದೇ ಕಾರ್ಯಕ್ಕೆ ಕೈಹಾಕುವುದಿಲ್ಲ, ಎಂಬಂತೆ. ಲೋಕದ ಸಾಮಾನ್ಯ ಜನರಂತೆ ಈ ಅಂಗಡಿಯನ್ನು ಕೂಡಲಸಂಗಮದೇವನೂ ಲಾಭದ ಪ್ರಯೋಜನಕ್ಕಾಗಿ ಇಟ್ಟಿದ್ದಾನೆಂದರೆ ಆಗ ಅವನ ಆಪ್ತಕಾಮತ್ವಕ್ಕೆ ಅಥವಾ ಪರಿಪೂರ್ಣ ಕಾಮತ್ವಕ್ಕೆ ಭಂಗ ಬರುತ್ತದೆ. ಸುಮ್ಮ ಸುಮ್ಮನೆ ಸೃಷ್ಟಿಸಿದನೆಂದರೆ ಅವನು ಉನ್ಮತ್ತ ಪ್ರವೃತ್ತಿಯುಳ್ಳವನಾಗಬೇಕಾಗುತ್ತದೆ. ಕೂಡಲಸಂಗನ ವಿಷಯದಲ್ಲಿ ಈ ಎರಡೂ ಸಂಗತಿಗಳು ಅಸಂಗತವಾಗುತ್ತವೆ. ಹಾಗಾಗಿ ಈ ಅಂಗಡಿ ಕೇವಲ ಅವನ ಲೀಲಾವ್ಯಾಪಾರದ ಅಂಗಡಿ.

ಇಂಥ ಅಂಗಡಿಯ ಮಾಲೀಕ ಜಾಣಹರದ ಅಂದರೆ ಬುದ್ಧಿವಂತ ವ್ಯಾಪಾರಿ. ಅವನ ಕೈಯಲ್ಲಿ ಜೀವಿಗಳ ಬದುಕಿನ ತಕ್ಕಡಿಯಿದೆ. ಆ ತಕ್ಕಡಿಯಲ್ಲಿ ಎರಡು ತಟ್ಟೆಗಳಿವೆ. ಅವುಗಳಲ್ಲಿ ಒಂದು ಪುಣ್ಯದ ತಟ್ಟೆ ಇನ್ನೊಂದು ಪಾಪದ ತಟ್ಟೆ ಇವೆರಡೂ ಸಮತೋಲನದ ಲೆಕ್ಕಾಚಾರದಲ್ಲಿರಬೇಕು. ಪುಣ್ಯವೂ ಅರ್ಧ ಕಾಣಿಯಷ್ಟೂ ಹೆಚ್ಚಿರಬಾರದು. ಅದರಂತೆ. ಪಾಪವೂ ಕಾಣಿಯಷ್ಟೂ ಕಡಿಮೆಯಿರಬಾರದು. ಏಕೆಂದರೆ ಪುಣ್ಯ ಹೆಚ್ಚಾದರೆ ಸ್ವರ್ಗದಲ್ಲಿ ಜನ್ಮ. ಪಾಪ ಹೆಚ್ಚಾದರೆ ನರಕದಲ್ಲಿ ಹುಟ್ಟು. ಆದ್ದರಿಂದ ಮನುಷ್ಯ ಜನ್ಮ ತತ್ರಾಪಿ ವೀರಶೈವ ಜನ್ಮ ಸಿಗುವುದು ಇವೆರಡರ ಒಮ್ಮನದಿಂದ ಅರ್ಥಾತ್ ಒಂದೇ ಮಾನದಿಂದ ಮಾತ್ರ. ಬಹುಜನ್ಮಕೃತೈಃ ಪುಣ್ಯೈಃ ಪ್ರಕ್ಷೀಣೇ ಪಾಪಪಂಜರೇ' ಅನೇಕ ಜನ್ಮಗಳಲ್ಲಿ ಮಾಡಿದ ಪಾಪವೂ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯದಿಂದ ನಾಶವಾಯಿತೆಂದರೆ ಪಾಪವೂ ಪುಣ್ಯವೂ ಒಂದು ಮಾನದ ಲೆಕ್ಕಾಚಾರವಾಗುತ್ತದೆ. ಇಂಥ ಒಮ್ಮನದ ಲೆಕ್ಕಾಚಾರದಲ್ಲಿ ಹುಟ್ಟಿದವುಗಳೇ ಶುದ್ಧಾಂತಃಕರಣ ದೇಹಿಗಳು. ಈ ಶುದ್ಧಾಂತಕರಣವುಳ್ಳ ದೇಹಿಗಳನ್ನು ಮಾತ್ರ ಹರದ ಅಂದರೆ ಪುಣ್ಯ ಪಾಪಗಳನ್ನು ಹರಣ ಮಾಡುವ ಕೂಡಲಸಂಗಮದೇವನು ನುಡಿಸುತ್ತಾನೆ. ಇಷ್ಟು ಮಾತ್ರವಲ್ಲದೆ ಈ ದೇಹಿಗಳ ನಡೆಯನ್ನು ಒಂದು ತಟ್ಟೆಯಲ್ಲಿ ನುಡಿಯನ್ನು ಒಂದು ತಟ್ಟೆ ಯಲ್ಲಿಟ್ಟು ತೂಗಿ ನೋಡುತ್ತಾನೆ. ಈ ನಡೆನುಡಿಯ ತಟ್ಟೆಗಳು ಸಮತೋಲನದಲ್ಲಿರಬೇಕು. ಆ ಕಡೆ ಈ ಕಡೆ ಎಳ್ಳಿನಷ್ಟೂ ಲೋಲತೆಯಿರಬಾರದು. ಈ ನಡೆನುಡಿಗಳ ತೂಕದಲ್ಲಿ ಕಾಣಿಯಷ್ಟು ಹೆಚ್ಚಾದರೂ ಅರ್ಧಕಾಣಿಯಷ್ಟು ಕಡಿಮೆಯಾದರೂ ಕೂಡಲಸಂಗಮದೇವನಿಗೆ ಇಷ್ಟವಾಗುವುದಿಲ್ಲ. ಕಾಣಿಯ ಸೋಲ ಅರ್ಧಗಾಣಿಯ ಗೆಲ್ಲ. ಅಂಥ ನ್ಯಾಯನಿಷ್ಠುರಿ ವ್ಯಾಪಾರಿ ಅವನು. ಅವೆರಡೂ ಒಮ್ಮನವಾದರೆ ಮಾತ್ರ ತನ್ನ ಲೀಲಾ ವ್ಯಾಪಾರಕ್ಕೆ ಸಲ್ಲುವ ನಾಣ್ಯವೆಂದು ಟಂಕಿಸಿ ನುಡಿಮುದ್ರೆಯನ್ನೊತ್ತುತ್ತಾನೆ. ಇಲ್ಲದಿದ್ದರೆ ನುಡಿಯನು ಅರ್ಥಾತ್ ತನ್ನ ಅಸಮ್ಮತಿಯನ್ನು ಸೂಚಿಸುವನು.

ಇಂತಹ ನಮ್ಮ ಹರದನ ವ್ಯಾಪಾರ ವ್ಯವಸ್ಥೆಯಲ್ಲಿ ಅವ-ಇವನೆಂಬ ಬಡವ-ಬಲ್ಲಿದನೆಂಬ ಅರಸ-ಆಳೆಂಬ ಭೇದವಿಲ್ಲ. ಅವರವರ ಕರ್ಮವನ್ನು ತಕ್ಕಡಿಯ ಒಂದು ತಟ್ಟೆಯಲ್ಲಿಟ್ಟು ಆ ಕರ್ಮಕ್ಕೆ ಸಮಾನವಾದ ಜಾತಿ ಆಯಸ್ಸು ಭೋಗಗಳನ್ನು ಮತ್ತೊಂದು ತಟ್ಟೆಯಲ್ಲಿಟ್ಟು ಜವೆಕಾಳಿನಷ್ಟು ಹೆಚ್ಚುಕಮ್ಮಿಯಿಲ್ಲದೆ ತೂಗಿ ಕೊಡುತ್ತಾನೆ. ಕರ್ಮಕ್ಕನುಗುಣವಾದ ಜಾತಿ ಆಯಸ್ಸು ಭೋಗಗಳಿಗೆ ಅವರವರ ಕರ್ಮವೇ ಕಾರಣ. ಈ ನೈರ್ಗುಣ್ಯಕ್ಕಾಗಲಿ ವೈಷಮ್ಯಕ್ಕಾಗಲಿ ನಮ್ಮ ಹರದನು ಜವಾಬ್ದಾರನಲ್ಲ. ಹೀಗೆ ನಮ್ಮ ಕೂಡಲಸಂಗಮದೇವ ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನ್ನಿಕ್ಕಿ ವ್ಯಾಪಾರ ಮಾಡುತ್ತಿದ್ದಾನೆ. ☆

* 'ಮಧುಕೇಶ್ವರ ನಿಲಯ', 5ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು.

ಭೂಮಿಯ ಉಳಿಸುವ ದಾರಿ ಸಮತೋಲನದಲ್ಲಿ ಬದುಕುವುದೊಂದೇ ಜೀವ ಉಳಿಯುವ ದಾರಿ. - ಬಸವರಾಜ ಒಕ್ಕುಂದ.

# ಪ್ರತಿಯೊಬ್ಬರೂ ಕೈಜೋಡಿಸಿದರೆ ಬದಲಾಗದಿರುವುದೇ? *

-ಬಿ.ಎಂ. ಪರಮೇಶ್ವರಪ್ಪ

ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ನೈರ್ಮಲ್ಯಕ್ಕೆ ಹೆಚ್ಚು ಆದ್ಯತೆ ಕೊಡಲು ಶ್ರೀ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್ ಸ್ಥಾಪನೆಯಾಗಿದ್ದು ತಮಗೆ ಗೊತ್ತಿರುವ ವಿಚಾರ. ಇದರ ಮೂಲ ಉದ್ದೇಶವೇನೆಂಬುದನ್ನು ಸವಿಸ್ಥಾರವಾಗಿ ಅಕ್ಟೋಬರ್ ತಿಂಗಳ ಸಿದ್ಧಗಂಗಾ ಮಾಸಪತ್ರಿಕೆಯಲ್ಲಿ ಮನವಿ ಎಂಬ ತಲೆಬರಹದಡಿಯಲ್ಲಿ ಪ್ರಕಟವಾಗಿರುವುದು ತಮ್ಮ ಗಮನಕ್ಕೆ ಬಂದಿದೆ ಎಂದು ತಿಳಿದಿರುತ್ತೇವೆ. ಈ ಮನವಿಗೆ ಅನೇಕ ಜನ ಸ್ಪಂದಿಸಿ ದೇಣಿಗೆ ನೀಡಿರುತ್ತಾರೆ. ಅವರ ಸದ್ಭಾವನೆಯ ದೇಣಿಗೆಗೆ ಪ್ರಾಂಜಲ ಮನದ ಧನ್ಯವಾದಗಳು. ಅವರ ಹೆಸರುಗಳನ್ನು ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ.

ಈ ಮಹತ್ವದ ಕಾರ್ಯಸಾಧನೆಯ ಬಗ್ಗೆ ದಿನಾಂಕ ೨೨-೧೨-೨೦೧೩ರಂದು ನಡೆದ ವಾರ್ಷಿಕ ಸರ್ವಸದಸ್ಯರ ಸಾಮಾನ್ಯ ಸಭೆಯಲ್ಲಿ ಡಾ॥ ಎಂ.ಎನ್. ಚನ್ನಬಸಪ್ಪನವರು ಮತ್ತು ನಿವೃತ್ತ ಮುಖ್ಯ ಅಭಿಯಂತರರಾದ ಶ್ರೀ ಬಿ.ಎನ್. ಚನ್ನಪ್ಪನವರು ಸವಿಸ್ತಾರವಾಗಿ ಸದಸ್ಯರ ಗಮನಕ್ಕೆ ತಂದಿರುತ್ತಾರೆ ಹಾಗೂ ಈ ಪವಿತ್ರ ಕಾರ್ಯಕ್ಕೆ ಎಲ್ಲರೂ ಉದಾರವಾಗಿ ದೇಣಿಗೆ ನೀಡಬೇಕೆಂದು ವಿನಂತಿ ಮಾಡಿಕೊಂಡಿರುತ್ತಾರೆ. ಈ ಯೋಜನೆಗೆ ಬೇಕಾಗಿರುವ ಅಂದಾಜು ವೆಚ್ಚ ೫ ಕೋಟಿಗಿಂತಲೂ ಹೆಚ್ಚು. ಅದರ ವಿವರವನ್ನು ಜನವರಿ ೨೦೧೪ರ ಮಾಸಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ. ಕೃಪೆಮಾಡಿ ಅವಲೋಕಿಸಿ ಈ ಪವಿತ್ರಕಾರ್ಯಕ್ಕೆ ಉದಾರವಾಗಿ ಸ್ಪಂದಿಸಬೇಕೆಂದು ಪ್ರಾರ್ಥಿಸುತ್ತೇವೆ.

ಮೊದಲನೆ ಹಂತದ ಕಾರ್ಯಯೋಜನೆಗೆ ೨ ಕೋಟಿ ರೂಪಾಯಿಗಳನ್ನು ಸಂಗ್ರಹಿಸುವ ಉದ್ದೇಶವಾಗಿದ್ದು ಸಂಘದ ೧೩೫೦೦ ಸದಸ್ಯರು ಕನಿಷ್ಟ ೨೦೦೦/- ರೂಗಳನ್ನು ನೀಡಿದರೆ ಬೇಕಾಗಿರುವ ಹಣ ಸಂಗ್ರಹವಾಗಲಿದ್ದು, ಮೊದಲನೇ ಹಂತದ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಸುಲಭ ಸಾಧ್ಯವಾಗುತ್ತದೆ ಎಂಬುದು ಸಭೆಯಲ್ಲಿ ಭಾಗವಹಿಸಿದ ಬಹುತೇಕ ಸದಸ್ಯರ ಮನದಾಳದ ಬಯಕೆಯಾಗಿದೆ, ಹಾಗೂ ೨೦೦೦/- ರೂಗಳನ್ನು ಸಲ್ಲಿಸುವುದು ಅಷ್ಟಾಗಿ ಕಷ್ಟವಲ್ಲವೆಂಬ ಅಭಿಪ್ರಾಯವು ವ್ಯಕ್ತವಾಗಿದೆ. ತಾವು ಸಲ್ಲಿಸುವ ದೇಣಿಗೆ ಸತ್ಕಾರ್ಯಕ್ಕೆ ಉಪಯೋಗವಾಗುವುದಲ್ಲದೆ, ಅದರಿಂದಾಗುವ ಲಾಭವೇ ಹೆಚ್ಚು ಎಂಬುದನ್ನು ತಾವು ಕೂಡ ತಿಳಿದವರಾಗಿದ್ದೀರಿ.

**ಕೊಡುವುದರಲ್ಲೇ ಹೆಚ್ಚು ಆನಂದವಿದೆ ಅನುಕೂಲವಿದೆ :**

ಬಸವತತ್ವಗಳಿಗೆ ಭಾಷ್ಯ ಬರೆದಂತೆ ಬದುಕಿದ ಅಥಣಿ ಮುರುಘೇಂದ್ರ ಶಿವಯೋಗಿಗಳ ಸಾನ್ನಿಧ್ಯದಲ್ಲಿ ೨೦ನೇ ಶತಮಾನದ ಪ್ರಾರಂಭದಲ್ಲಿ ನಡೆದ ಘಟನೆಯನ್ನು ಈ ಸಂದರ್ಭದಲ್ಲಿ ಸ್ಮರಿಸುವುದು ಸೂಕ್ತವೆನಿಸುತ್ತದೆ. ಕೊಟ್ಟಿದ್ದು ವ್ಯರ್ಥವಾಗುವುದಿಲ್ಲ ಅದರಿಂದ ಅನುಕೂಲವೇ ಹೆಚ್ಚು.

ಕಾರ್ತೀಕ ಮಾಸದ ಚಳಿಯಲ್ಲಿ ವಯೋವೃದ್ಧ ಜಂಗಮಮೂರ್ತಿ ನಡುಗುತ್ತಾ ಗಚ್ಚಿನ ಮಠಕ್ಕೆ ಬಂದರು. ಇದನ್ನು ಗಮನಿಸಿದ ಮುರುಘೇಂದ್ರ ಶಿವಯೋಗಿಗಳು, ಜಂಗಮಮೂರ್ತಿಗೆ ಪೂಜೆ, ಪ್ರಸಾದ, ವಸತಿಗೆ ವ್ಯವಸ್ಥೆ ಮಾಡಲು ಗಚ್ಚಿನ ಮಠದ ಅಧ್ಯಕ್ಷರಾದ ಸಿದ್ಧಲಿಂಗಪ್ಪಗಳಿಗೆ ಅಪ್ಪಣೆ ಮಾಡಿದರು. ಅದರಂತೆ ವ್ಯವಸ್ಥೆ ಮಾಡಿ ಸಿದ್ಧಲಿಂಗಪ್ಪಗಳು ಅವರ ಕಂಬಳಿಯನ್ನೇ ಜಂಗಮ ಮೂರ್ತಿಗೆ ಹೊದಿಸಿ ಮಲಗಿಸಿದರು. ಅವರು ಆನಂದದಿಂದ ನಿದ್ದೆ ಮಾಡಿದರು. ಬೆಳಗು ಪೂಜೆ ಪ್ರಸಾದ ಮುಗಿದ ನಂತರ ಆ ಜಂಗಮಮೂರ್ತಿ ಶಿವಯೋಗಿಗಳ ಸಮ್ಮುಖದಲ್ಲಿ, ವ್ಯವಸ್ಥೆ ಆಗದೀ ಚಲೋಯಿತ್ರಪಾ, ಚಲೋಯಿತ್ರಪ್ಪ. ಹೊದಿಸಿದ ಕಂಬಳಿಯು ಚಲೋ ಐತಿ ಚಲೋ ಐತಿ ಎಂದರು. ಸೂಕ್ಷ್ಮಮತಿಗಳಾದ ಶಿವಯೋಗಿಗಳು ಅವರ ಮಾತಿನ ಸೂಕ್ಷ್ಮತೆಯನ್ನು ಗಮನಿಸಿ ಜಂಗಮಮೂರ್ತಿಗೆ ಕಂಬಳಿ ಬೇಕೆಂಬುದನ್ನು ಅರಿತು, ಸಿದ್ಧಲಿಂಗಪ್ಪಗಳಿಗೆ ನಿಮ್ಮ ಕಂಬಳಿ ಅವರಿಗೆ ಕೊಟ್ಟು ಬಿಡ್ರಪಾ ಎಂದರು. ಗಚ್ಚಿನ ಮಠದ ಅಧಿಕಾರಿಗಳಾದ ಸಿದ್ಧಲಿಂಗಪ್ಪಗಳು ಅಧಿಕಾರವಿಲ್ಲದ ಶಿವಯೋಗಿಗಳ ಮಾತಿಗೆ ಚ್ಯುತಿ ಬಾರದಂತೆ ಎಲ್ಲಾ ಸಂದರ್ಭದಲ್ಲೂ ನಡೆದುಕೊಂಡವರು. ಅದರಂತೆ ಕಂಬಳಿ ಕೊಟ್ಟರು. ಆಗ ಜಂಗಮಮೂರ್ತಿ ಶಿವಯೋಗಿಗಳನ್ನು ಕುರಿತು 'ಮುರುಘೇಪ್ಪಾs ಬೇಡಿದ್ದನ್ನು ನೀಡುವ ಶಿವ ಸಂಕುಲಕ್ಕೆ ಸೇರಿದವ ನೀನಪ್ಪ' ಎಂದು ಹೇಳಿ ಹೊರಟು ಹೋದರು.

ಎರಡು ದಿವಸ ಕಳೆಯಿತು. ಗಚ್ಚಿನಮಠಕ್ಕೆ ಒಂದು ಚೀಲ ಪಾರ್ಸೆಲ್ ಬಂತು. ಅದನ್ನು ಬಿಚ್ಚಿ ನೋಡಿದಾಗ ಒಂದು ನೂರು ಕಂಬಳಿ ಇದ್ದವು. ಈ ವಿಚಾರವನ್ನು ಶಿವಯೋಗಿಗಳಲ್ಲಿ ಅರಿಕೆ ಮಾಡಿಕೊಂಡಾಗ ಅವರು ಅಪ್ಪಣೆ ಕೊಡಿಸಿದ್ದು ಹೀಗೆ **'ಸಿದ್ಧಲಿಂಗಪ್ಪಾ, ಶಿವನ ಲೆಕ್ಕನೇ ಹಂಗ್ರಪಾs ಅವನ ಲೆಕ್ಕ ಚೊಕ್ಕ ಪಕ್ಕಾನ್ರಪಾs ನಮ್ಮ ಲೆಕ್ಕ ಹುಸಿಲೆಕ್ಕನ್ರಪಾ' ಒಂದು ಕೊಟ್ಟರೆ ಹತ್ತು ಕೊಡುತಾನೆ, ನೂರ ಕೊಡತಾನ್ರಪಾs, ಕೊಡುವ ಭಾವನೆ ಪವಿತ್ರವಾಗಿದ್ದರೆ ಶಕ್ತಿ ಇರತದ್ರಪಾ'. ಅದಕ್ಕೆ ಅಪ್ಪಗಳು (ಬಸವಣ್ಣನವರಿಗೆ)ಅಪ್ಪಣೆ ಕೊಟ್ಟಿರೊದು ಲಿಂಗದ ಬ್ಘಾಯಿ ಜಂಗಮವೆಂದು ಪಡಿಪದಾರ್ಥಗಳನ್ನೀಡಿದರೆ ಮುಂದೆ ಸಕಲಾರ್ಥಗಳನ್ನೀವ ಎನ್ನುವ ಮಾತು ಯಾವತ್ತೂ ಹುಸಿಯಾಗಲ್ರಪಾ.** ಈ ಮಹಾನ್ ಸಂದೇಶ ನಮಗೂ ಮಾರ್ಗದರ್ಶನವಾಗುವುದಲ್ಲವೆ?

**ಪ್ರತಿಯೊಬ್ಬರೂ ಕೊಟ್ಟರೆ ಪ್ರಪಂಚ ಬದಲಾಗದಿರುವುದೆ?**

೨೦ನೇ ಶತಮಾನದ ಕೊನೆಯಲ್ಲಿ ನಡೆದ ಘಟನೆಗಳನ್ನು ಈ ಸಂದರ್ಭದಲ್ಲಿ ಅವಲೋಕಿಸುವುದು ಅನ್ವರ್ಥವೆನಿಸುತ್ತದೆ. 'ಕೊಡುವುದರಿಂದ ಪ್ರತಿಯೊಬ್ಬರು ಈ ವಿಶ್ವವನ್ನು ಹೇಗೆ ಬದಲಾಯಿಸಬಹುದು. Giving how each of us can change the world ಎನ್ನುವ ಬಿಲ್ ಕ್ಲಿಂಟನ್‌ರವರ ಪುಸ್ತಕದ ಆಯ್ದ ಭಾಗಗಳನ್ನು ತಿಳಿಯೋಣ.

ನಾವು ಬೇರೆಯವರಿಗೆ ಕೊಡದೆ ಏನನ್ನು ಸಾಧಿಸಲು ಸಾಧ್ಯವಿಲ್ಲ ಎನ್ನುವುದು ಮಾರ್ಟಿನ್ ಲೂಥರ್‌ಕಿಂಗ್ ಅಮೆರಿಕಾದ ಗಾಂಧಿಯ ಮಾತು. ಈ ಮಾತನ್ನು ೧೨ನೆಯ ಶತಮಾನದ ಶರಣರು ಆಗುಮಾಡಿ ತೋರಿಸಿದರು. ಅದನ್ನು ಅಪ್ಪಿಕೊಂಡ ಮಠಗಳು ಅನೇಕ ಅವುಗಳಲ್ಲಿ, ಶ್ರೀ ಸಿದ್ಧಗಂಗಾಮಠ ಹಾಗೂ ಗುರುಪರಂಪರೆ ಅತ್ಯಂತ ಎತ್ತರ ಸ್ಥಾನದಲ್ಲಿರುವುದನ್ನು ಕಾಣಬಹುದಾಗಿದೆ. ಬಿಲ್‌ಗೇಟ್ಸ್‌ನಿಂದ ಹಿಡಿದು ಕ್ಯಾಲಿಪೋರ್ನಿಯಾದ ಬೀಚನ್ನು ಸ್ವಚ್ಛಗೊಳಿಸಲು ಮುಂದಾದ ೬ ವರ್ಷದ ಮೆಕೆಂಜಿ ಸ್ಪೈನರ ತನಕ ಈ ವಿಶ್ವದ ಸ್ವಾಸ್ಥ ಕಾಪಾಡಲು ಹೆಣಗಿದವರೆ.

೧. ನ್ಯೂಯಾರ್ಕ್ ದಂಪತಿಗಳು ಆಫ್ರಿಕಾಕ್ಕೆ ಮದುವೆಗೆಂದು ಹೋಗಿದ್ದರು. ಅಲ್ಲಿನ ಅನೇಕ ಶಾಲೆಗಳಲ್ಲಿ ಕಪ್ಪುಹಲಗೆ, ಬಳಪ, ಪುಸ್ತಕಗಳು ಇಲ್ಲದಿರುವುದನ್ನು ಕಂಡು, ತಕ್ಷಣ ಸಂಘವೊಂದನ್ನು ಸ್ಥಾಪಿಸಿ ಹಣ ಸಂಗ್ರಹಿಸಿ, ಕೇವಲ ೩ ವರ್ಷಗಳಲ್ಲಿ ೩೫ ಶಾಲೆಗಳನ್ನು ಅಭಿವೃದ್ಧಿಪಡಿಸಿದರು. ಶೇ ೫ರಲ್ಲಿದ್ದ ತೇರ್ಗಡೆ ಶೇ. ೬೦ಕ್ಕೆ ಬದಲಾಗಿತ್ತು.

೨. ಉಗಾಂಡದ ಹಳ್ಳಿಯೊಂದಕ್ಕೆ ಭೇಟಿ ನೀಡಿದ ಸ್ವಯಂ ಸೇವಾಸಂಸ್ಥೆಯ ಕಾರ್ಯಕರ್ತರು .ಅಲ್ಲಿನ ಬಡ ಹೆಂಗಸೊಬ್ಬಳಿಗೆ ೧೨ ಕುರಿಗಳನ್ನು ನೀಡಿದರು. ಶಾಲೆಗೆ ಫೀಜು ಕಟ್ಟಲಾಗದೆ ಮನೆಯಲ್ಲಿದ್ದ ಮಕ್ಕಳನ್ನು ಆ ಹೆಂಗಸು ಕುರಿ ಹಾಲು ಮಾರಿ ಓದಲು ಕಳಿಸಿದಳು. ಆ ಮಕ್ಕಳೆಲ್ಲಾ ವಿದ್ಯಾವಂತರಾದರು. ಸ್ವಯಂಸೇವಾ ಸಂಘದ ಕರಾರಿನಂತೆ ಒಂದು ಕುರಿ, ಹೆಣ್ಣುಮರಿಗೆ ಜನ್ಮ ನೀಡಿದರೆ ಅದನ್ನು ಮತ್ತೊಂದು ಕುಟುಂಬಕ್ಕೆ ಉಚಿತವಾಗಿ ನೀಡಬೇಕು. ೩ ವರ್ಷಗಳಲ್ಲಿ ಇಡೀ ಗ್ರಾಮದ ಚಿತ್ರಣವೇ ಬದಲಾಯಿತು. ೧೨ ಕುರಿಗಳಿಂದ ಊರಿನ ಜನರೆಲ್ಲಾ ವಿದ್ಯಾವಂತರಾದರು.

೩. ಒಸಿಯೊಲ ಮೆಕಾರ್ಟಿ ಅಮೆರಿಕಾದ ಮೆಸಿಸಿಪ್ಪಿಯ ಪುಟ್ಟ ಹಳ್ಳಿಯವಳು. ಅವಳ ಉದ್ಯೋಗ ಬಟ್ಟೆ ಒಗೆದು ಇಸ್ತ್ರೀ ಮಾಡಿಕೊಡುವುದು. ೭೫ ವರ್ಷಗಳ ಕಾಲ ಇದೇ ಕೆಲಸ ಮಾಡಿ ಜೀವನ ಸಾಗಿಸಿದಳು. ಸಾಕಷ್ಟು ಹಣ ಸಂಪಾದಿಸಿದಳು. ತನಗಾಗಿ ಕಾರು ಕೊಳ್ಳಲಿಲ್ಲ. ಮನೆ ಖರೀದಿಸಲಿಲ್ಲ. ಚಿಕ್ಕಪ್ಪನ ಮನೆಯಲ್ಲಿ ವಾಸವಾಗಿದ್ದಳು. ಅವಳ ಆಸ್ತಿ ಎಂದರೆ ಒಂದು ತಳ್ಳುವ ಗಾಡಿ. ಮನೆಮನೆಗೆ ಗಾಡಿ ತಳ್ಳಿಕೊಂಡು ಹೋಗಿ ಬಟ್ಟೆ ಸಂಗ್ರಹಿಸಿ ಒಗೆದು ಇಸ್ತ್ರೀ ಮಾಡಿ ತಲುಪಿಸುತ್ತಿದ್ದಳು. ಕೊನೆಗೆ ಒಂದು ಟ್ರಸ್ಟ್ ಸ್ಥಾಪಿಸಿ ದುಡಿದ ಹಣದಲ್ಲಿ ಒಂದುವರೆ ಲಕ್ಷ ಡಾಲರ್ ಹಣವನ್ನು ಬಡ ಅರ್ಹ ವಿದ್ಯಾರ್ಥಿಗಳ ಸ್ಕಾಲರ್‌ಶಿಪ್ಪಿಗಾಗಿ ಸದರ್ನ್ ಮೆಸಿಸಿಪ್ಪಿ ವಿಶ್ವವಿದ್ಯಾಲಯಕ್ಕೆ ದಾನವಾಗಿ ಕೊಟ್ಟಿದ್ದಳು.

ಒಬ್ಬ ಸಾಮಾನ್ಯ ದೋಬಿ ಹೆಣ್ಣುಮಗಳು ಸಂಪಾದಿಸಿದ ಹಣದಲ್ಲಿ ಒಂದು ಗುಲಗಂಜಿಯನ್ನು ಅನುಭವಿಸದೆ ಎತ್ತಿಕೊಟ್ಟಿದ್ದಳು. ಬಡವಿದ್ಯಾರ್ಥಿಗಳಿಗೆ ಅನುಕೂಲವಾದರೆ ತಾನು ದುಡಿದಿದ್ದು ಸಾರ್ಥಕ ಎಂದು ಬಾವಿಸಿದ್ದ. ಓಸಿಯೊಲ ಮೆಕಾರ್ಟಿಗೆ ಆಕೆಯ ಕಾರ್ಯ ತೃಪ್ತಿ ತಂದಿತ್ತು. ಆನಂದ ಕೊಟ್ಟಿತ್ತು. ಸಂತೋಷವುಂಟು ಮಾಡಿತ್ತು. ಹೀಗೆ ನೀಡಿ ಸಂತಸಪಟ್ಟ ಒಸಿಯೋಲಾ ನಡೆ ಎಲ್ಲರಿಗೂ ಆದರ್ಶ. ಅನುಕರಣೀಯ ಅಲ್ಲವೆ? ಅದೇ ವಿಶ್ವವಿದ್ಯಾಲಯ ಅವಳಿಗೆ

* ನಿವೃತ್ತ ಅಭಿಯಂತರರು, ಬಾಸೂರು ಮತ್ತು ಅಂಚೆ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

ಗೌರವ ಪದವಿ ನೀಡಿ ಸನ್ಮಾನಿಸಿತ್ತು. ಅಮೆರಿಕಾದಲ್ಲೇ ಪ್ರಸಿದ್ಧಿಯಾದ ಹಾರ್ವರ್ಡ್ ವಿಶ್ವವಿದ್ಯಾಲಯ ಅವಳಿಗೆ ಡಾಕ್ಟರೇಟ್ ನೀಡಿತ್ತು. ಅಧ್ಯಕ್ಷ ಬಿಲ್ ಕ್ಲಿಂಟನ್ ಅಮೆರಿಕಾದ ಎರಡನೆ ಅತ್ಯುಚ್ಚ ನಾಗರೀಕ ಪ್ರಶಸ್ತಿ –'Presidential Citizens Medal' ನೀಡಿ ಗೌರವಿಸಿದ್ದರು. ವಿಶ್ವಸಂಸ್ಥೆ ಆಕೆಯನ್ನು ಸನ್ಮಾನಿಸಿತ್ತು. ದೊಡ್ಡ ದೇಶದ ಅಧ್ಯಕ್ಷ ಬಿಲ್ ಕ್ಲಿಂಟನ್ ಆಕೆಯ ತ್ಯಾಗದ ಸೇವೆಯನ್ನು ಪ್ರಪಂಚಕ್ಕೆ ಪರಿಚಯಿಸಿಕೊಟ್ಟರು. ಆದರೆ ಇದಕ್ಕಿಂತ ಸಾವಿರಪಟ್ಟು ಸೇವೆ ಮಾಡಿದವರನ್ನು ಪರಿಚಯಿಸಿ ಕೊಡುವ ಉದಾರತೆ ನಮ್ಮ ದೇಶದ ಆಳ್ವಿಕೆ ಮಾಡುವವರಿಗೆ ಇದೆಯೆ? ಬದ್ಧತೆ ಇದೆಯೇ? ರಾಜಕಾರಣಕ್ಕಿಂತ ಮಿಗಿಲಾದ ಬದುಕು ಇದೆ ಎಂಬುದನ್ನು ತಿಳಿಯುವ ಗೋಜಿಗೆ ಹೋಗಿದ್ದಾರೆಯೇ? ಇದಕ್ಕೆ ಕಾಲವೇ ಉತ್ತರಿಸಬೇಕು.

**ಮಾಡಿ–ನೀಡಿ ಮರೆತು ವಿರಾಗಿಯಾದರು. ಮೌನವಾಗಿ ದೇವರಾದರು :**

**By serving every one can become great- ಸೇವೆ ಮಾಡುವ ಮೂಲಕ ಪ್ರತಿಯೊಬ್ಬರು ದೊಡ್ಡವರಾಗಬಹುದು. ಇದು ಕೆಲವೇ ಜನರಿಗೆ ಅನ್ವಯ ವಾಗುತ್ತದೆ. ಒಂದು ಜೀವ ೮೫ ವರ್ಷಗಳಿಂದಲೂ ದಿನ ದಲ್ಲಿ ೧೮ ಗಂಟೆಗಳಿಗಿಂತ ಹೆಚ್ಚು ಕಾಲ ಕಾಯಕದಲ್ಲಿ ನಿರತವಾಗಿದೆ. ತನ್ನ ಒಂದು ಒಡಲು ತುಂಬಿಸಿಕೊಳ್ಳಲಿಕ್ಕೆ ಅಲ್ಲ ಸಾವಿರಾರು ಒಡಲು ತುಂಬಿಸುವುದಕ್ಕೆ. ಅದು ಅವರ ಧರ್ಮವಾಗಿದೆ. ಹೀಗೆ ಲಕ್ಷಾನುಲಕ್ಷ ಬಡ ವಿದ್ಯಾರ್ಥಿಗಳ ಬಾಳಿಗೆ ಬೆಳಕಾಗಿದ್ದಾರೆ. ಅವರ ನೆಮ್ಮದಿಯ ಬದುಕಿಗೆ ಕಾರಣರಾಗಿದ್ದಾರೆ. ಅವರೇ ನಮ್ಮೆಲ್ಲರ ಆರಾಧ್ಯದೈವ, ಸಂತ, ಶಿವಯೋಗಿ, ಮಕ್ಕಳಲ್ಲಿ ದೇವರನ್ನು ಕಂಡ ಸಿದ್ಧಗಂಗೆಯ ಸಿದ್ಧಪುರುಷ ಶ್ರೀ ಶಿವಕುಮಾರಮಹಾಸ್ವಾಮಿಗಳವರು. ಅವರ ಬದುಕೇ ತೆರೆದ ಪುಸ್ತಕವಿದ್ದಂತೆ. ಅವರ ಜೀವನದಲ್ಲಿ ವೈಯಕ್ತಿಕ ಎನ್ನುವ ಮಾತೇ ದೂರ. ಇಷ್ಟೆಲ್ಲಾ ಸೇವೆ ಮಾಡಿದರು ಮಾಡಿದೆನೆಂಬ ಅಹಂ ಇಲ್ಲ. The most selfish one Alphabet word is 'I' avoid it** ಅನ್ನುವುದಕ್ಕೆ ಸಾಕ್ಷಿಯಾಗಿದ್ದಾರೆ. ಮಾಡಿದ್ದಕ್ಕೆ ಪ್ರತಿಫಲದ ನಿರೀಕ್ಷೆ ಅವರ ಕನಸು ಮನಸಿನಲ್ಲಿಯೂ ಇಲ್ಲ. ಎಷ್ಟೆಲ್ಲಾ ಸಾಧಿಸಿ ಸಮಾಜಕ್ಕೆ ನೀಡಿದರು. ಅದರ ಭ್ರಮೆ ಸ್ವಲ್ಪವೂ ಇಲ್ಲ. 84 ವರ್ಷಗಳ ದೀರ್ಘ ಸಾಧನೆಯ ಪಯಣದಲ್ಲಿ ಯಾರನ್ನೂ ಏನನ್ನೂ ಕೇಳಿಲ್ಲ. ಕೇಳುವುದು ಎನ್ನುವ ಪದ ಅವರ **ಶಬ್ದಕೋಶದಲ್ಲಿ ಇಲ್ಲವೆ ಇಲ್ಲ. ಅದು ಅವರು ನಡೆದು ಬಂದ ದಾರಿ, ಅವರ ಗುರುಗಳು ತೋರಿದ ಹೆದ್ದಾರಿ. ಈ ದಾರಿಯಲ್ಲಿ ನಡೆಯುವುದು ಬಲು ಕಷ್ಟ. ನಡೆಯುವವರು ಬಹು ವಿರಳ. ಆದರೂ ಪೂಜ್ಯರು ನಡೆದಿದ್ದಾರೆ. ಇಂದಿಗೂ ನಡೆಯುತ್ತಿದ್ದಾರೆ. ಅದು ಅವರ ವಿಶೇಷ ಗುಣಗಳಲ್ಲಿ ಒಂದು.**

**ಯಾವುದು ಆ ಹೆದ್ದಾರಿ ?**

ಗುರುವಿನ ಸ್ಥಾನ ಮಹತ್ವದ್ದು, ಅದರ ವ್ಯಾಖ್ಯಾನ ವಿಸ್ತಾರ. ಈ ಸಂದರ್ಭಕ್ಕನ್ವಯವಾಗುವುದನ್ನು ಮಾತ್ರ ನೋಡೋಣ. **ನುಡಿ–ನಡೆ ಒಂದಾದವರು ಗುರುಗಳು ಎಂದರು. ಉದ್ಧಾನ ಶಿವಯೋಗಿಗಳು ಈ ವರ್ಗಕ್ಕೆ ಸೇರಿದವರು.**

ದಿವಾನ್ ಮಿರ್ಜಾ ಇಸ್ಮಾಯಿಲ್ ಉದಾತ್ತ ವಿಚಾರ ವಾದಿಗಳು, ಹೃದಯವಂತರು. ಸರ್ವಧರ್ಮದವರನ್ನು ಸಮಾನವಾಗಿ ಕಂಡ ಅಪರೂಪದ ವ್ಯಕ್ತಿತ್ವ, ಒಮ್ಮೆ ಕಾಟನ್ ಪೇಟೆ ವೀಕ್ಷಣೆಗೆ ಹೋದಾಗ, ಒಬ್ಬ ಗರ್ಭಿಣಿ ಹೆಂಗಸು ತುಂಬಿದ ನೀರಿನ ಕೊಡವನ್ನು ತಲೆಯ ಮೇಲೆ ಹೊತ್ತು ಕೊಂಡು ಮನೆಗೆ ಹೋಗುತ್ತಿದ್ದನ್ನು ನೋಡಿ ಅವರ ಮನ ಕರಗಿತ್ತು, ಹೃದಯ ಮಿಡಿದಿತ್ತು, ಸಂಬಂಧಪಟ್ಟವರಿಗೆ ಹೇಳಿ ಮರು ದಿವಸವೆ ಆ ಹೆಣ್ಣುಮಗಳ ಮನೆಯ ಹತ್ತಿರ ನಲ್ಲಿ ಹಾಕಿಸಿ, ಗರ್ಭಿಣಿ ಹೆಂಗಸು, ದೂರದಿಂದ ನೀರು ತರು ವುದನ್ನು ತಪ್ಪಿಸಿದ್ದರು. ಇದು ಅವರ ಹೃದಯವಂತಿಕೆಗೆ ಹಿಡಿದ ಕನ್ನಡಿ. ಅವರ ಉನ್ನತ ಸಂಸ್ಕಾರಕ್ಕೆ ಸಾಕ್ಷಿ.

ಸರ್ಕಾರದ ಕಾರ್ಯನಿಮಿತ್ತ ಕ್ಯಾತ್ಸಂದ್ರದ ಮೂಲಕ ಹೋಗುವಾಗ ತಪ್ಪದೆ ಸಿದ್ಧಗಂಗಾಮಠಕ್ಕೆ ಬಂದು ಉದ್ಧಾನ ಶಿವಯೋಗಿಗಳ ದರ್ಶನಮಾಡಿ ಆಶೀರ್ವಾದ ಪಡೆದು ಕೊಂಡು ಹೋಗುತ್ತಿದ್ದರು. ಬೇರೆಯ ಮಠದ ಸ್ವಾಮಿಗಳ ಅವರ ಮಠಕ್ಕೆ ಅನೇಕ ಸವಲತ್ತು ಬಯಸಿ ಅರ್ಜಿ ಕೊಡುತ್ತಾರೆ. ಈ ಮಠಕ್ಕೆ ಹೀಗೆ ಹತ್ತಾರು ಸಾರಿ ಬಂದರೂ ಈ ಮಠದ ಸ್ವಾಮಿಗಳು ಏನನ್ನು ಬಯಸುತ್ತಿಲ್ಲವಲ್ಲ ಎಂದು ತನ್ನ ಆಪ್ತ ಸಹಾಯಕರ ಮೂಲಕ ಮಠಕ್ಕೆ ಏನು ಸವಲತ್ತು ಬೇಕು ಎನ್ನುವ ಸಂದೇಶ ಕಳಿಸಿದರು. ಇದನ್ನು ತಿಳಿದ ಉದ್ಧಾನಶಿವಯೋಗಿಗಳು ಹೇಳಿದ್ದು ಹೀಗೆ. 'ಬೇಡಿದ್ದೆಲ್ಲ ನೀಡುವ ಸಿದ್ಧಲಿಂಗ ಇರುವಾಗ ಇವರನ್ನು ಕೇಳಿ ಭಿಕ್ಷುಕ ನಾಗಲೇನು?' ಎಂದು ಹೇಳಿಕಳಿಸಿದರಂತೆ. ಅಂದರೆ ಯಾರನ್ನು ಏನನ್ನು ಕೇಳಬಾರ ದೆಂಬುದು ಅವರ ಅಚಲ





ನಿಲುವಾಗಿತ್ತು. ಇದನ್ನು ಶಿವಕುಮಾರಸ್ವಾಮಿಗಳು ನಡೆಸಿ ಕೊಂಡು ಹೋಗಬೇಕೆಂಬುದು ಅವರ ಅಪೇಕ್ಷೆ ಯಾಗಿತ್ತು. ಒಮ್ಮೆ ಪೂಜ್ಯರನ್ನು ಕುರಿತು ಹೀಗೆ ಅಪ್ಪಣೆ ಕೊಡಿಸಿದರು. **'ನೋಡ್ರೀ ಸ್ವಾಮಿಗಳೇ ಯಾರನ್ನು ಏನನ್ನೂ ಕೇಳಬಾರದ್ರೀ, ಕೇಳಬಾರದ್ರೀ. ನಿಮ್ಮ ಸೇವೆಯನ್ನು ನೋಡಿ ಜನ ತಾವಾಗಿಯೇ ಮುಂದೆ ಬಂದು ಕೊಡಬೇಕ್ರೀ. ಬೇಡುವವನು ಭಿಕ್ಷುಕ, ನೀಡುವವನು ಸಾವುಕಾರ. ನೀವು ನೀಡುತ್ತಾ ಹೋಗ್ರೀ. ಯಾವುದಕ್ಕೂ ಕೊರತೆಯಾಗಲ್ಲ. ಮುಂದುವರಿದು ಸೇವೆ ಮಾಡಿಪಡಕೋ ಬೇಕಿಲ್ರಿ, ನೊಡ್ರಿ ನಮ್ಮ ಗುರುಗಳಿಗೆ ಧನುರ್ಮಾಸದಲ್ಲಿ ತಂಗಡಿ ಸೊಪ್ಪು ತಂದು ಸಾರು ಮಾಡಿ ಪ್ರಸಾದ ನೀಡುಮಾಡಿದೆ. ಅವರು ಏನು ಕೊಡಬೇಕು ಎಲ್ಲಾ ಕೊಟ್ರು ಕಣ್ರೀ.** ಇದು ಉದ್ಧಾನ ಶಿವಯೋಗಿಗಳು ಅವರ ಶಿಷ್ಯರಾದ ಶಿವಕುಮಾರಸ್ವಾಮಿ ಗಳಿಗೆ ನಡೆದು ತೋರಿಸಿದ ದಾರಿ. ಇದೇ ಹೆದ್ದಾರಿ.

**ಬಡಮಕ್ಕಳ ಬಾಳಿಗೆ ಆಸರೆ :**

ಎಲ್ಲೋ ಹಳ್ಳಿಯಲ್ಲಿದ್ದ ಲಕ್ಷಾನುಲಕ್ಷ ನಮ್ಮಂತಹ ಬಡ ಮಕ್ಕಳಿಗೆ ಆಶ್ರಯ ಕೊಟ್ಟರು, ಅನ್ನ ನೀಡಿದರು. ಅಕ್ಷರ ವಿದ್ಯೆಗೆ ಅನುಕೂಲ ಮಾಡಿಕೊಟ್ಟರು. ಅರಿವನ್ನು(ಸಂಸ್ಕಾರ) ನೀಡಿದರು. ಕಡುಬಡವರಿಗೆ ಅರಿವೆ(ಬಟ್ಟೆ) ಕೊಟ್ಟರು. ಹೀಗೆ ಐದು ಅಗಳನ್ನು ನೀಡಿ ಸಾಮಾಜಿಕವಾಗಿ ಸಮಾನತೆ ದೊರೆಯುವಂತೆ ಮಾಡಿದರು. ಶೈಕ್ಷಣಿಕವಾಗಿ ಸ್ವಾವಲಂಬಿ ಗಳನ್ನಾಗಿ ಮಾಡಿ ಒಳ್ಳೊಳ್ಳೆ ಉದ್ಯೋಗ ದೊರೆಯುವಂತೆ ಮಾಡಿದರು. ಇಡೀ ಕುಟುಂಬವೆಲ್ಲ ಶಿಕ್ಷಣ ಪಡೆದು ದ್ವಿಗುಣ ವಾಗುತ್ತಾ ಹೋಗಿ ಆರ್ಥಿಕವಾಗಿ ಅನುಕೂಲಸ್ಥರಾದೆವು. ಸಂಸ್ಕಾರ ನೀಡಿ ಸುಸಂಸ್ಕೃತರನ್ನಾಗಿ ಮಾಡಿದರು. ನಾವುಗಳು ಸಿದ್ಧಗಂಗೆಯ ವಿದ್ಯಾರ್ಥಿಗಳಾದ ಕಾರಣ ಸಮಾಜದಲ್ಲಿ ಗೌರವ ಸ್ಥಾನ ದೊರೆಯಿತು. ಹೀಗೆ ಅದ್ಭುತ ಸೇವೆ ಮಾಡಿ ಅವರು ದೊಡ್ಡವರಾಗಿದ್ದಲ್ಲದೆ ನಮ್ಮನ್ನು ದೊಡ್ಡವರನ್ನಾಗಿ ಮಾಡಿದರು. **ಚಸ್ಟರ್‌ಸನ್ ಎನ್ನುವನು ಒಂದು ಪ್ರಶ್ನೆ ಹಾಕುತ್ತಾನೆ. ಉತ್ತರವನ್ನು ಕೊಡುತ್ತಾನೆ. Who is great? He is great who makes feel everybody great.** ತಮ್ಮ ಸಮೀಪ ಬಂದವರನ್ನೆಲ್ಲಾ **ದೊಡ್ಡವರನ್ನಾಗಿ ಯಾರು ಮಾಡುತ್ತಾರೆ ಅವರೇ ದೊಡ್ಡವರು. ಇಂತಹ ಗುರುವಿನ ದರ್ಶನಾಶೀರ್ವಾದ ಪಡೆಯುತ್ತಿರುವ ನಾವು ನೀವುಗಳು ಭಾಗ್ಯವಂತರಲ್ಲವೇ?**

**ಕೃತಜ್ಞತೆಯ ಸೇವೆಯನ್ನು ನಾವು ಸಲ್ಲಿಸುವುದು ಅಗತ್ಯವಾಗಿದೆ:**

ನಮ್ಮ ಭವ್ಯಬಾಳಿಗೆ ಬೇಕಾದ ಎಲ್ಲಾ ಸೌಲಭ್ಯವನ್ನು ಕರುಣಿಸಿದ ನಮ್ಮ ಆರಾಧ್ಯದೈವಕ್ಕೆ ಸೇವೆ ಸಲ್ಲಿಸುವ ಮೂಲಕ ಕೃತಜ್ಞತೆಯನ್ನು ಸಲ್ಲಿಸುವುದು ಪ್ರಸ್ತುತ ಅಗತ್ಯವಲ್ಲವೆ?

ಆಫ್ರಿಕಾದಲ್ಲಿ ೩೫ ಶಾಲೆಗಳನ್ನು ಅಭಿವೃದ್ಧಿಗೊಳಿಸಿದ ನ್ಯೂಯಾರ್ಕ ದಂಪತಿಗಳನ್ನು ೧೨ ಕುರಿಗಳನ್ನು ಕೊಟ್ಟು ಒಂದು ಊರಿನ ಜನರನ್ನೆಲ್ಲಾ ವಿದ್ಯಾವಂತರನ್ನಾಗಿ ಮಾಡಿದ ಸ್ವಯಂ ಸೇವಾಸಂಸ್ಥೆಯ ಕಾರ್ಯಕರ್ತರನ್ನು ಕೃತಜ್ಞತೆಯ ಭಾವನೆಯಿಂದ ಸ್ಮರಿಸುವಾಗ ಪೂಜ್ಯರ ಬಹುಮುಖ ಸೇವೆ ಯನ್ನು ಎಷ್ಟು ಸ್ಮರಿಸಿದರೂ ಕಡಿಮೆಯಲ್ಲವೇ?

ಒಂದುವರೆ ಲಕ್ಷ ಡಾಲರ್ ಕೊಟ್ಟ ಒಸಿಯೋಲಳಿಗೆ ನಾಲ್ಕಾರು ಗೌರವಗಳು ಸಂದಾಯವಾದವು. ಆ ಹಣದಿಂದ ಸ್ಕಾಲರ್‌ಶಿಪ್ ಪಡೆದ ಕೆಲವೇ ವಿದ್ಯಾರ್ಥಿಗಳು ರೋಮಾಂಚನಕ್ಕೆ ಒಳಪಡುವಾಗ, ಧನ್ಯತಾಭಾವನೆಯಿಂದ ಬೀಗುವಾಗ, ಲಕ್ಷಾನುಲಕ್ಷ ವಿದ್ಯಾರ್ಥಿಗಳು ಶ್ರೀಮಠದಿಂದ ಪಡೆದ ಉಪಕಾರಸ್ಮರಣೆಯನ್ನು ಸ್ಮರಿಸುವಾಗ, ಎಷ್ಟು ರೋಮಾಂಚನ ಗೊಳ್ಳುತ್ತಿರಬಹುದು, ಧನ್ಯತಾಭಾವನೆಯಿಂದ ಬೀಗುತ್ತಿರ ಬಹುದು, ಕೃತಜ್ಞತಾಭಾವನೆಯಿಂದ ಸ್ಮರಿಸುತ್ತಿರಬಹುದು ಊಹಿಸಲು ಸಾಧ್ಯವೆ? ಇಷ್ಟೆಲ್ಲ ಮಾಡಿದರೂ ಈ ಜೀವ ಮಠದ ಹಳೆಯ ವಿದ್ಯಾರ್ಥಿಗಳಿಂದ ಆರ್ಥಿಕವಾಗಿ ಏನನ್ನೂ ಬಯಸುವುದಿಲ್ಲ. ಆದರೆ ಬಯಸುವುದಾದರೂ ಏನು? ವರ್ಷಕ್ಕೊಮ್ಮೆ ನಮ್ಮೆನ್ನೆಲ್ಲ ಕರೆಸಿ, ಎಲ್ಲರೂ ಶಾಂತಿಯ, ನೆಮ್ಮದಿಯ ಸುಖವಾದ ಜೀವನ ಸಾಗಿಸಿ ಕಾಯಕ ನಿಷ್ಠರಾಗಿ, ಪ್ರಾಮಾಣಿಕವಾಗಿ ಇರಿ ಎನ್ನುತ್ತಾರೆ. ಮಕ್ಕಳಿಗೆ ಸಂಸ್ಕಾರ ನೀಡಿ ಎಂದು ಆಶೀರ್ವದಿಸಿ, ಆನಂದದಿಂದ ಊಟ ಮಾಡಲೆಂದು ಲಾಡು ಮಾಡಿಸಿ ನೀಡುವುದನ್ನು ತಪ್ಪಿಸುವುದಿಲ್ಲ. ಅದು ಅವರಿಗೆ ಸಂತೃಪ್ತಿಯನ್ನು ಕೊಡುತ್ತದೆ. ಆದರೆ ನಾವು ಸುಮ್ಮನಿರುವುದು ತರವೆ? ಒಂದು ಲೋಟ ನೀರು ಕೊಟ್ಟವರಿಗೆ, ಬಸ್ಸಿನಲ್ಲಿ ಸೀಟು ಕೊಟ್ಟವರಿಗೆ, ಬಸ್ಸಿನ ಮಾರ್ಗ ಹೇಳಿದವರಿಗೆ, ಊರಿನ ದಾರಿ ತೋರಿಸಿದವರಿಗೆ, ಕೊನೆಗೆ ತಂಬಾಕು ಕೊಟ್ಟವರಿಗೂ Thanks Thanks ಎಂದು ಹೇಳುವುದನ್ನು ಕಾಣುತ್ತಿದ್ದೇವೆ. ಎಲ್ಲವನ್ನು ಪಡೆದ ನಾವು ಎಷ್ಟು ಕೃತಜ್ಞತೆ ಸಲ್ಲಿಸಿದರೂ ಕಡಿಮೆಯೇ? ಹಾಗಾದರೆ ಹೇಗೆ ಸಲ್ಲಿಸಬೇಕು?

ಸಲ್ಲಿಸುವ ಮಾರ್ಗ ಯಾವುದು?

ನಮ್ಮ ಸಂಘದಲ್ಲಿ ಉದಾತ್ತ ಭಾವನೆಯಿಂದ ಸದಸ್ಯತ್ವವನ್ನು ಪಡೆದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳು, ಅನೇಕ ಭಕ್ತರು ಶ್ರೀಮಠದಿಂದ ಯಾವುದೇ ಉಪಕಾರ ಪಡೆಯದಿದ್ದರೂ, ಮಠದ ಕಾರ್ಯಗಳಿಗೆ ಉದಾರವಾದ ಸಹಾಯ ಹಸ್ತವನ್ನು ನೀಡಲು ಮುಂದಾಗಿರುವಾಗ, ಶ್ರೀಮಠದಿಂದ ಎಲ್ಲವನ್ನೂ ಪಡೆದು ನೆಮ್ಮದಿಯ ಜೀವನ ಸಾಗಿಸುತ್ತಿರುವ ನಾವು ಪೂಜ್ಯರು ಕೈಗೊಂಡಿರುವ ಸೇವಾಕಾರ್ಯಗಳಿಗೆ ಅವರಿಗಿಂತ ಉದಾರವಾಗಿ ನೀಡುವುದೇ ಸರಿಯಾದ ಮಾರ್ಗವಲ್ಲವೇ?

ಪೂಜ್ಯ ಉದ್ದಾನ ಶಿವಯೋಗಿಗಳು ಆಶೀರ್ವದಿಸಿದ ಜೋಳಿಗೆ, ರುದ್ರಾಕ್ಷಿ ಮಾಲೆಯನ್ನೇ ಮಹತ್ವದ ಆಸ್ತಿಯೆಂದು ನಂಬಿ, ಅವರು ಅಪ್ಪಣೆ ಕೊಡಿಸಿದಂತೆ ಮಹಾನ್ ತತ್ವಗಳಿಗೆ ಅಪಚಾರವಾಗದ ರೀತಿ ಪೂಜಾನಿಷ್ಠೆಯುಳ್ಳವರಾಗಿ, ಆಚಾರ ನಿಷ್ಠೆ ಉಳಿಸಿಕೊಂಡು ಅಖಂಡ ಬ್ರಹ್ಮಚರ್ಯತ್ವವನ್ನು ಕಾಪಾಡಿ ಕೊಂಡು, ತ್ರಿವಿಧ ದಾಸೋಹಕ್ಕೆ ಚ್ಯುತಿ ಬಾರದಂತೆ ಸೇವಾ ಮನೋಭಾವನೆಯನ್ನೇ ಉಸಿರಾಗಿಸಿಕೊಂಡು, ಕಾವಿ ಹಾಕಿದವರೆಲ್ಲರಿಗೂ ಆದರ್ಶರಾಗಿ ಸನ್ಯಾಸತ್ವಕ್ಕೆ ಸತ್ವ ತಂದು ಕೊಟ್ಟು ೮೪ ವರ್ಷಗಳಿಂದಲೂ ಮಹಾಜೀವನ(ಪರಮ ದಾಸೋಹ) ನಡೆಸುತ್ತಾ ಬಂದಿರುವ ಮಹಾಸನ್ನಿಧಿಯವರು ಇಳಿ ವಯಸ್ಸಿನಲ್ಲೂ ಶ್ರೀಮಠದ ಕಾರ್ಯಗಳು ಸುಸೂತ್ರವಾಗಿ ನಡೆಯಲು ಶ್ರಮಿಸುತ್ತಿರುವಾಗ, ಪೂಜ್ಯರು ಹೊತ್ತಿರುವ ಭಾರದಲ್ಲಿ, ಅಣುಮಾತ್ರವನ್ನಾದರೂ ಹೊರುವ ಸಂಕಲ್ಪ ಮಾಡಿ ಕಾರ್ಯರೂಪಕ್ಕೆ ತರುವುದು ನಮ್ಮ ಗುರಿಯಾಗಬೇಕಲ್ಲವೆ? ಈ ಎಲ್ಲಾ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್ ಸದ್ಯ ಹಾಕಿಕೊಂಡಿರುವ ಯೋಜನೆಯನ್ನು ಸಾಕಾರ ಗೊಳಿಸಲು ಕೈಜೋಡಿಸೋಣ. ನೀವು ಸಲ್ಲಿಸುವ ಕಾಣಿಕೆಗೆ 80G ಪ್ರಕಾರ ತೆರಿಗೆ ವಿನಾಯಿತಿ ಇರುತ್ತದೆ.

Let all of us start, proceed & achieve the goal with slogan, 'By giving how each of us can change the water supply & sanitory system of Sree Siddaganga Math'. ಪ್ರತಿಯೊಬ್ಬರು ಕೊಡುವ ಮೂಲಕ ಶ್ರೀ ಸಿದ್ಧಗಂಗಾ ಮಠದ ನೀರು ಸರಬರಾಜು ಮತ್ತು ನೈರ್ಮಲ್ಯೀಕರಣ ಬದಲಾಯಿಸಬಹುದೆನ್ನುವ ಘೋಷಣೆಯೊಂದಿಗೆ ಪ್ರಾರಂಭಿಸಿದರೆ ಮುಂದೆ ನಡೆದು ಗುರಿ ಮುಟ್ಟಲು ಸಾಧ್ಯ ಎನ್ನುವುದನ್ನು ಮರೆಯದಿರೋಣ.

ಈ ಯೋಜನೆ ಪೂರ್ಣಗೊಳ್ಳುವವರೆಗೆ ಈ ಘೋಷಣೆ ನಮ್ಮ ಉಸಿರಾಗಲಿ, ಮೂಲಮಂತ್ರವಾಗಲೆಂದು ಸಂಕಲ್ಪ ಮಾಡೋಣ. ಮಾಡಿ–ನೀಡಿ–ಮರೆತು ವಿರಾಗಿಯಾಗಿರುವ, ಮಾಡಿ–ನೀಡಿ–ಮೌನವಾಗಿ ದೇವರಾಗಿರುವ ಮಹಾಗುರುವಿಗೆ ಭಕ್ತಿನಮನಗಳೊಂದಿಗೆ ನಮ್ಮ ಶಕ್ತಿ ಮೀರಿ ಸಹಾಯ ಹಸ್ತ ನೀಡೋಣ, ಸಹಕಾರ ಮಾಡೋಣ, ಸೇವೆ ಸಲ್ಲಿಸೋಣ. ಇದು ದೊರೆತಿರುವುದು ನಮ್ಮ ಬದುಕಿನ ಭಾಗ್ಯ ಎನ್ನುವುದನ್ನು ಮರೆಯದಿರೋಣ ಹಾಗೂ ಕಾರ್ಯಪ್ರವೃತ್ತರಾಗೋಣ.

ಪರಮಪೂಜ್ಯರ ೧೦೦ನೇ ಜನ್ಮದಿನೋತ್ಸವದ ಸಂದರ್ಭದಲ್ಲಿ ಭಾಗವಹಿಸಿದ್ದ ರಾಷ್ಟ್ರಪತಿ ಡಾ॥ ಎ.ಪಿ.ಜೆ. ಅಬ್ದುಲ್ ಕಲಾಂಜಿರವರು ಪರಮಪೂಜ್ಯ ಸ್ವಾಮೀಜಿಯವರು ಲಕ್ಷಾಂತರ ವಿದ್ಯಾರ್ಥಿಗಳ ಭವಿಷ್ಯಕ್ಕಾಗಿ ನೀಡುತ್ತಿರುವ ರಾಷ್ಟ್ರದಲ್ಲೆಲ್ಲೂ ಕಾಣದ ದಾಸೋಹಸೇವೆ ಕುರಿತು ಇಂಗ್ಲಿಷ್‌ನಲ್ಲಿ ರಚಿಸಿದ ಕವನದ ಕನ್ನಡ ರೂಪಾಂತರವೂ ಕೂಡ ಕೊಡುವುದರಿಂದ ಬದಲಾಯಿಸಬಹುದೆನ್ನುವುದಕ್ಕೆ ಸಾಕ್ಷಿಯಾಗಿದೆ.

*ನೀವು ನಿಮ್ಮೆದುರಿಗೆ ನೋಡಿ ಒಬ್ಬ ರಸ ಋಷಿ*
*ಸುಂದರ ಅನುಭಾವದ ಹಾರೈಕೆ ಹೊತ್ತ ಯೋಗಋಷಿ*
*ಅನುದಿನವೂ ಭಗವಂತ ನಿಮಗೆ ಕರುಣಿಸಿದ ಈ ಯೋಗಿ*
*ಬೆಲೆಯುಳ್ಳ ಜೀವನದ ವೈಢೂರ್ಯವಾಗಿ*
*ತಪದ ಬದುಕಿನ ಅಮೂಲ್ಯ ಹಾರವಾಗಿ*
*ಮೂವತ್ತಾರು ಸಾವಿರ ವಜ್ರಗಳ ಸಂಯೋಗ*
*ಮಾನವೀಯತೆಯೇ ಈ ಋಷಿಯ ಸಂದೇಶ*
*ಓ ನನ್ನ ನಾಗರಿಕ ಬಂಧುಗಳೇ*
*ಕೊಡುವಲ್ಲಿ ಪಡೆಯಿರಿ ನೆಮ್ಮದಿಯ ದೇಹಾತ್ಮಗಳಲ್ಲಿ*
*ಕೊಡಲು ಎಲ್ಲವೂ ಇದೆ ನಿಮ್ಮಲ್ಲಿ*
*ನಿಮಗಿರುವ ಅರಿವನ್ನು ಹಂಚಬಹುದು*
*ಅನುಕೂಲವಿದ್ದರೆ ಅನುವಿಗದ ನೀಡಬಹುದು.*
*ನೋವು ನರಳಿಕೆಗಳನ್ನು ಪರಿಹರಿಸಲು*
*ನಿಮ್ಮ ಹೃದಯ ಮನಗಳನು ಬಳಸಿ*
*ನೊಂದ ಹೃದಯಗಳಿಗೆ ನಲಿವ ನೀಡಿ*
*ಕೊಡುವಲ್ಲಿ ಪಡೆಯಿರಿ ನೆಮ್ಮದಿಯ*
*ನಿಮ್ಮ ಕ್ರಿಯೆಗಳಿಗೆಲ್ಲ ದೈವ ಕಾರುಣ್ಯವಿರಲಿ.*

ಕನ್ನಡಕ್ಕೆ : ಗೊ.ರು. ಚೆನ್ನಬಸಪ್ಪ





ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

| ಕ್ರಸಂ. | ಹೆಸರು ಮತ್ತು ಊರು | ಮೊತ್ತ | ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|---|---|---|
| 1. | ಡಾ॥ ಎಂ.ಎನ್. ಚನ್ನಬಸಪ್ಪ ಎಸ್.ಐ.ಟಿ. ತುಮಕೂರು | 1,00,001.00 | 31. | ಶ್ರೀ ಸುರೇಶ್‌ಕುಮಾರ್, ಎಸ್‌ಐಟಿ, ತುಮಕೂರು | 1,500.00 |
| 2. | ಶ್ರೀ ಜಿ. ಹರ್ಷವರ್ಧನ, ಬೆಂಗಳೂರು | 81,000.00 | 32. | ಶ್ರೀ ಸಿ. ಪುಟ್ಟರಾಜು, ಬೆಂಗಳೂರು | 1,000.00 |
| 3. | ಶ್ರೀ ಜಿ. ಗುರುಬಸಪ್ಪ, ಬೆಂಗಳೂರು | 50,000.00 | 33. | ಶ್ರೀ ಎಂ. ಮಲ್ಲೇಶ್, ಮೈಸೂರು | 1,001.00 |
| 4. | ಶ್ರೀ ಬಿ. ಶಿವಣ್ಣ, ತುಮಕೂರು | 11,111.00 | 34. | ಶ್ರೀ ಎ.ಪಿ. ರುದ್ರಪ್ಪ, ಮೈಸೂರು | 501.00 |
| 5. | ಶ್ರೀ ಬಿ. ಗಾಂಧಿ, ಬೆಂಗಳೂರು | 11,000.00 | 35. | ಶ್ರೀ ರಾಮಕೃಷ್ಣಯ್ಯ, ಬೆಂಗಳೂರು | 1,001.00 |
| 6. | ಶ್ರೀಮತಿ ಬಸವರಾಜಮ್ಮ, ಬೆಂಗಳೂರು | 10,101.00 | 36. | ಶ್ರೀ ಜಿ. ಮರುಳಸಿದ್ಧಯ್ಯ | 2,000.00 |
| 7. | ಶ್ರೀ ಕರಿಸಿದ್ಧಯ್ಯ, ತಿಪಟೂರು | 10,001.00 | 37. | ಶ್ರೀ ಎಸ್.ಎಂ. ನಾಗರಾಜಪ್ಪ, ಬೆಂಗಳೂರು | 2,000.00 |
| 8. | ಶ್ರೀ ಎಸ್. ಶಿವಕುಮಾರ್, ಶ್ರೀಸಿದ್ಧಗಂಗಾಮಠ | 10,001.00 | 38. | ಶ್ರೀ ಎಸ್.ಆರ್. ಸದಾಶಿವಯ್ಯ, ಬೆಂಗಳೂರು | 1,000.00 |
| 9. | ಶ್ರೀ ಬಿ.ರಾಜಶೇಖರಯ್ಯ, ತುಮಕೂರು | 10,000.00 | 39. | ಶ್ರೀ ಎಂ.ಆರ್. ಬೈಲಪ್ಪ, ಹೊಸೂರು | 1,001.00 |
| 10. | ಶ್ರೀ ಸೋಮಶೇಖರ್, ಬೆಂಗಳೂರು | 10,000.00 | 40. | ಶ್ರೀ ಟಿ.ಎಂ. ಶಿವಪ್ರಸಾದ್, ಬೆಂಗಳೂರು | 1,001.00 |
| 11. | ಶ್ರೀ ಸಿ. ಶಾಂತರಾಜು, ಸಿದ್ಧನಹೊಸಹಳ್ಳಿ | 10,000.00 | 41. | ಶ್ರೀಮತಿ ಜಿ. ಬಸಮ್ಮ, ಬೆಂಗಳೂರು | 2,000.00 |
| 12. | ಶ್ರೀ ಕೆ.ಎಂ. ರೇವಣಸಿದ್ಧಯ್ಯ, ಮೈಸೂರು | 10,000.00 | 42. | ಶ್ರೀ ಬಿ.ಆರ್. ರುದ್ರಾರಾಧ್ಯ, ಬೆಂಗಳೂರು | 1,000.00 |
| 13. | ಶ್ರೀ ಜಿ. ಕುಮಾರಸ್ವಾಮಿ, ಶ್ರೀ ಸಿದ್ಧಗಂಗಾಮಠ | 10,000.00 | 43. | ಶ್ರೀ ಎನ್. ಶ್ರೀಕಂಠಸ್ವಾಮಿ, ಚಾಮರಾಜನಗರ | 1,001.00 |
| 14. | ಶ್ರೀ ಹೆಚ್.ಬಿ. ನಂಜುಂಡಯ್ಯ, ತುಮಕೂರು | 6,000.00 | 44. | ಶ್ರೀ ಹೆಚ್.ಸಿ. ಪ್ರಭುಶಂಕರ, ಮೈಸೂರು | 1,500.00 |
| 15. | ಶ್ರೀ ಬಿ.ಎಂ. ಪರಮೇಶ್ವರಪ್ಪ, ಬಾಸೂರು. | 6,000.00 | 45. | ಶ್ರೀ ಎಂ.ಎಸ್. ಗುರುಸಿದ್ಧಯ್ಯ, ಮಲ್ಲಸಂದ್ರ | 2,000.00 |
| 16. | ಶ್ರೀಮತಿ ಪಾರ್ವತಮ್ಮ ರಂಗಪ್ಪರೆಡ್ಡಿ, ಬೆಂಗಳೂರು | 5,001.00 | 46. | ಶ್ರೀ ಎಂ.ಆರ್. ಮಲ್ಲಿಕಾರ್ಜುನಯ್ಯ, ಬೆಂಗಳೂರು | 1,000.00 |
| 17. | ಶ್ರೀ ಕೆ.ಎಂ. ಜಗದೀಶ್, ಬೆಂಗಳೂರು | 5,001.00 | 47. | ಶ್ರೀ ಸಿ.ಎಂ. ಪುಟ್ಟಸ್ವಾಮಿ, ಬೆಂಗಳೂರು | 1,001.00 |
| 18. | ಶ್ರೀ ಕೆ. ಶಿವಪ್ರಸಾದ್, ಬೆಂಗಳೂರು | 5,000.00 | 48. | ಶ್ರೀ ಈಶ್ವರಯ್ಯ, ಕೊಳ್ಳೇಗಾಲ | 1,000.00 |
| 19. | ಶ್ರೀ ಪಿ.ಎಸ್. ಸಿದ್ಧಗಂಗಯ್ಯ, ಶ್ರೀಸಿದ್ಧಗಂಗಾಮಠ | 5,000.00 | 49. | ಶ್ರೀ ಹೆಚ್.ಜಿ. ಸೋಮಶೇಖರಯ್ಯ,ಹೊಳೆನರಸೀಪುರ | 1,000.00 |
| 20. | ಶ್ರೀ ಬಿ. ಶಿವಕುಮಾರಯ್ಯ, ಬೆಂಗಳೂರು | 5,000.00 | 50. | ಶ್ರೀ ಟಿ.ವಿ. ಲೋಕೇಶಪ್ಪ, ಕೊಟ್ಟೂರು | 1,000.00 |
| 21. | ಶ್ರೀ ಹೆಚ್. ಗಂಗಪ್ಪ, ಬೆಂಗಳೂರು | 5,000.00 | 51. | ಶ್ರೀ ಕೆ.ಸಿ. ಚಿಕ್ಕಣ್ಣ, ಕೊಳಾಲ | 1,001.00 |
| 22. | ಶ್ರೀ ಓ.ವಿ. ಹುಚ್ಚವೀರಯ್ಯ, ಶ್ರೀಸಿದ್ಧಗಂಗಾಮಠ | 5,000.00 | 52. | ಶ್ರೀ ಶಿವಶಂಕರಯ್ಯ, ಮಲ್ಲತ್ತಹಳ್ಳಿ | 1,001.00 |
| 23. | ಶ್ರೀ ಮಹಂತರುದ್ರಯ್ಯ, ಶ್ರೀಸಿದ್ಧಗಂಗಾಮಠ | 5,000.00 | 53. | ಶ್ರೀ ಸಿ.ಎಂ. ರಂಗಶ್ಯಾಮಯ್ಯ, ತುಮಕೂರು | 1,001.00 |
| 24. | ಶ್ರೀ ಎಂ. ಶಿವಣ್ಣ, ಬೆಂಗಳೂರು | 5,000.00 | 54. | ಶ್ರೀ ಹೆಚ್.ಎಂ. ಚಂದ್ರಶೇಖರ್, ಬೆಂಗಳೂರು | 1,001.00 |
| 25. | ಶ್ರೀ ಪಿ.ಎನ್. ಚಂದ್ರಶೇಖರಯ್ಯ, ಶ್ರೀಸಿದ್ಧಗಂಗಾಮಠ | 5,000.00 | 55. | ಶ್ರೀ ಹೆ.ವಿ. ರಾಜಣ್ಣ, ಬೆಂಗಳೂರು | 2,000.00 |
| 26. | ಶ್ರೀ ಬಿ.ಎಸ್. ಪುಟ್ಟಸ್ವಾಮಿ, ಬೆಂಗಳೂರು | 2,001.00 | 56. | ಶ್ರೀ ಕೆ. ಸಿದ್ಧಗಂಗಯ್ಯ, ಬೆಂಗಳೂರು | 2,000.00 |
| 27. | ಶ್ರೀ ಎಸ್.ಬಿ. ದೊಡ್ಡನಗೌಡ | 1,001.00 | 57. | ಶ್ರೀ ಹೆಚ್.ಎಂ. ಮಹದೇವು, ಮಂಡ್ಯ | 3,000.00 |
| 28. | ಶ್ರೀ ಎಂ. ಮಂಜಣ್ಣ | 1,001.00 | 58. | ಶ್ರೀ ಎಸ್. ಶಂಕರಪ್ಪ, ತುಮಕೂರು | 1,000.00 |
| 29. | ಶ್ರೀ ಬಿ. ಶಿವಗಂಗಯ್ಯ, ಮೈಸೂರು | 1,000.00 | 59. | ಶ್ರೀ ಎಂ.ಆರ್. ರಾಮಣ್ಣ, ತಿಪಟೂರು | 1,000.00 |
| 30. | ಶ್ರೀ ಎಂ.ಎಸ್. ರೇಣುಕಾನಂದ, ಹಾಸನ | 1,500.00 | 60. | ಶ್ರೀ ತಿಮ್ಮೇಗೌಡ, ತಿಪಟೂರು | 1,000.00 |
| | | | 61. | ಶ್ರೀ ಜಿ.ಪಿ. ರಾಜಣ್ಣ, ಬೆಂಗಳೂರು | 1,000.00 |



## ದಾನಿಗಳ ಪಟ್ಟಿ

| ಕ್ರಸಂ. | ಹೆಸರು ಮತ್ತು ಊರು | ಮೊತ್ತ | ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|---|---|---|
| 62. | ಶ್ರೀ ವಿ. ಮಂಜುನಾಥ, ಚಿತ್ರದುರ್ಗ | 1,500.00 | 96. | ಶ್ರೀ ಅಡವೀಶಯ್ಯ, ಕುದುರಗೆರೆ | 1,001.00 |
| 63. | ಶ್ರೀ ಉಗ್ರೇಗೌಡ, ಗುಡ್ಡಪ್ಪನಾಯಕನಹಳ್ಳಿ | 1,000.00 | 97. | ಶ್ರೀ ಜಿ.ಇ. ಬಸವರಾಜಪ್ಪ, ತರೀಕೆರೆ | 2,000.00 |
| 64. | ಶ್ರೀ ಸಿ. ಶಿವಸ್ವಾಮಿ, ಬೆಂಗಳೂರು | 1,000.00 | 97. | ಶ್ರೀ ಎ. ಮುನಿರಾಜು, ಡಿ.ಬಿ.ಪುರ | 1,100.00 |
| 65. | ಶ್ರೀ ಜೆ. ಮಹದೇವಯ್ಯ, ಕೊಳ್ಳೇಗಾಲ | 1,000.00 | 99. | ಶ್ರೀಮತಿ ಶಕುಂತಲ ಜಯದೇವ್, ಬೆಂಗಳೂರು | 3,000.00 |
| 66. | ಶ್ರೀ ಜೆ.ಎಸ್. ದೇವರಾಜು, ಬೆಂಗಳೂರು | 1,000.00 | 100. | ಶ್ರೀಮತಿ ಬಿ.ಸಿ. ಕಸ್ತೂರಮ್ಮ, ತುಮಕೂರು | 1,001.00 |
| 67. | ಶ್ರೀ ಕೆ.ಟಿ. ಕುಮಾರ, ಕನ್‌ಬಾಳ್ | 1,000.00 | 101. | ಶ್ರೀ ಎಂ.ಬಿ. ರಾಮಕೃಷ್ಣಯ್ಯ, ಬೆಂಗಳೂರು | 1,100.00 |
| 68. | ಶ್ರೀ ಮುದ್ದಪ್ಪ, ರಾಮಚಂದ್ರಪುರ | 1,200.00 | 102. | ಶ್ರೀ ತಿಪ್ಪೇಸಿದ್ಧಯ್ಯ, ಬೆಂಗಳೂರು | 2,001.00 |
| 69. | ಶ್ರೀ ಟಿ.ಆರ್. ಚಂದ್ರಶೇಖರಯ್ಯ, ಬೆಂಗಳೂರು | 1,001.00 | 103. | ಶ್ರೀ ರೇವಣಸಿದ್ಧಯ್ಯ, ನೆಲಮಂಗಲ | 1,001.00 |
| 70. | ಶ್ರೀ ಎಂ.ಎಲ್. ನಂಜುಂಡಪ್ಪ, ಕುಣಿಗಲ್ | 1,000.00 | 104. | ಶ್ರೀ ಬಿ.ಎಸ್. ಸಿದ್ಧಗಂಗಯ್ಯ, ಕೆ.ಜಿ. ಮಠ | 1,000.00 |
| 71. | ಶ್ರೀ ಆರ್.ಎಂ. ನಂಜುಂಡಯ್ಯ, ಬೆಂಗಳೂರು | 1,000.00 | 105. | ಶ್ರೀ ಎಂ. ಬಸವರಾಜು, ಬೆಂಗಳೂರು | 1,000.00 |
| 72. | ಶ್ರೀ ವಿ. ರಂಗಪ್ಪ, ಚೇಲಕುಂಟೆ | 1,000.00 | 106. | ಶ್ರೀ ಹೆಚ್. ರಾಮೇಗೌಡ, ಬೆಂಗಳೂರು | 1,000.00 |
| 73. | ಶ್ರೀ ಗಂಗಭೈರಯ್ಯ, ಬೆಂಗಳೂರು | 1,000.00 | 107. | ಶ್ರೀ ಪಿ.ವಿ. ರುದ್ರಯ್ಯ, ಪುಟ್ಟಸಂದ್ರ | 1,000.00 |
| 74. | ಶ್ರೀ ಬೈಕೆರೆ ನಾಗೇಶ್, ನವದೆಹಲಿ | 1,000.00 | 108. | ಶ್ರೀ ತೃಪ್ತಿ, ಪಾತಗಾನಹಳ್ಳಿ | 1,000.00 |
| 75. | ಶ್ರೀ ಬಿ.ಆರ್. ಶಿವಾನಂದ, ಬಿಸಲಾಪುರ | 1,000.00 | 109. | ಶ್ರೀ ಕೆಂಪಹನುಮಯ್ಯ, ಚಿಕ್ಕಕೊರಟಗೆರೆ | 1,001.00 |
| 76. | ಶ್ರೀ ದಕ್ಷಿಣಾಮೂರ್ತಿ, ಬೆಂಗಳೂರು | 1,000.00 | 110. | ಶ್ರೀ ಸಿ.ಹೆಚ್. ಚನ್ನಕೇಶವಯ್ಯ, ಹಿರಿಯೂರು | 1,001.00 |
| 77. | ಶ್ರೀ ಹೆಚ್.ಡಿ. ಭೀಮಣ್ಣ, ಹರಿಯಪ್ಪನಹಳ್ಳಿ | 1,001.00 | 111. | ಶ್ರೀ ಆರ್. ಗೋವಿಂದಪ್ಪ, ತುಮಕೂರು | 1,000.00 |
| 78. | ಶ್ರೀಮತಿ ಎಸ್. ನಾಗರತ್ನಮ್ಮ, ಬೆಂಗಳೂರು | 1,000.00 | 112. | ಶ್ರೀ ಎನ್. ನರಸಯ್ಯ, ತುಮಕೂರು | 1,000.00 |
| 79. | ಶ್ರೀ ಬಸವರಾಜುಗೌಡ, ಬಳ್ಳಾರಿ | 1,000.00 | 113. | ಶ್ರೀ ಸಿ. ಕೃಷ್ಣಮೂರ್ತಿ, ಮೈಸೂರು | 2,000.00 |
| 80. | ಶ್ರೀ ಕೆ. ರಾಮರೆಡ್ಡಿ, ಬಳ್ಳಾರಿ | 1,000.00 | 114. | ಶ್ರೀ ಬಿ. ಸಿದ್ಧಲಿಂಗಯ್ಯ, ಕೋರ | 1,001.00 |
| 81. | ಶ್ರೀ ಶೇಖರಗೌಡ, ಬಳ್ಳಾರಿ | 1,000.00 | 115. | ಶ್ರೀ ಎಂ.ಎಸ್. ಚಂದ್ರಪ್ರಸಾದ್, ಬೆಂಗಳೂರು | 1,000.00 |
| 82. | ಶ್ರೀ ದಾಳಪ್ಪ, ಬೆಂಗಳೂರು | 1,000.00 | 116. | ಶ್ರೀ ಸೀನಪ್ಪ ಸಿದ್ಧಗ ಗಳಗಿ, ಇಟಗಿ | 1,001.00 |
| 83. | ಶ್ರೀ ಆಂಜನಪ್ಪ, ಬೆಂಗಳೂರು | 1,000.00 | 117. | ಶ್ರೀ ಬಿ.ಆರ್. ರಂಗಸ್ವಾಮಯ್ಯ, ಬೆಂಗಳೂರು | 1,001.00 |
| 84. | ಶ್ರೀ ಕೆ.ಎಂ. ಸಿದ್ಧಲಿಂಗಪ್ಪ, ತುಮಕೂರು | 1,000.00 | 118. | ಶ್ರೀ ಎಸ್. ಮಹದೇವಯ್ಯ, ಹುಲಿಕೆರೆ | 3,000.00 |
| 85. | ಶ್ರೀ ಲೋಕೇಶಮೂರ್ತಿ, ಬೆಂಗಳೂರು | 1,001.00 | 119. | ಶ್ರೀ ಕೆ.ಎಂ. ಲಿಂಗಪ್ಪ, ಮೂಕವಳ್ಳಿ | 1,000.00 |
| 86. | ಶ್ರೀ ಗಂಗರಾಜಪ್ಪ, ದಾವಣಗೆರೆ | 1,001.00 | 120. | ಶ್ರೀ ತ.ನ. ಬಸವಮೂರ್ತಿ, ಹುಲಿಯೂರ್ | 2,002.00 |
| 87. | ಶ್ರೀ ಕೆ. ನಾಗರಾಜು, ಮಾದೇನಹಳ್ಳಿ | 1,001.00 | 121. | ಶ್ರೀ ಕೆ.ಪಿ. ರಾಜಣ್ಣ, ಬೆಂಗಳೂರು | 1,000.00 |
| 88. | ಪ್ರೊ.ಜಿ. ಪರಮೇಶ್ವರಪ್ಪ, ಬೆಂಗಳೂರು | 1,000.00 | 122. | ಶ್ರೀ ಎಸ್. ಕುಮಾರಸ್ವಾಮಿ, ಬೀರಸಂದ್ರ | 1,000.00 |
| 89. | ಶ್ರೀ ಎಸ್ ಮಲ್ಲನಗೌಡ, ಸೇಡಂ | 1,100.00 | 123. | ಶ್ರೀ ಎಸ್.ವಿ. ರವೀಂದ್ರನಾಥ ಠಾಕೂರ್,ತುಮಕೂರು | 1,000.00 |
| 90. | ಶ್ರೀ ಸುರೇಶ್, ಸೇಡಂ | 1,100.00 | 124. | ಶ್ರೀ ಕೆ.ಸಿ. ಗಂಗಣ್ಣ, ಚಾಮರಾಜನಗರ | 1,000.00 |
| 91. | ಶ್ರೀ ತಮ್ಮಯ್ಯ, ಹರಿವಣಪುರ | 1,000.00 | 125. | ಶ್ರೀ ಜಿ. ನಂಜಪ್ಪ, ವಿಜಯನಗರ, ಬೆಂ. | 1,000.00 |
| 92. | ಶ್ರೀ ವಿದ್ವಾನ್ ಕೆ.ಎಸ್. ಶಿವನಂಜಯ್ಯ, ಶ್ರೀಮಠ | 1,000.00 | 126. | ಶ್ರೀ ಕೆ.ಎನ್. ಬಸವರಾಜು, ತುಮಕೂರು | 2,001.00 |
| 93. | ಶ್ರೀ ಎಸ್. ರೇಣುಕಯ್ಯ, ಮರೂರು | 3,000.00 | 127. | ಶ್ರೀ ಪ್ರೇಮ ಸೋಮಸುಂದರ್, ಬೆಂಗಳೂರು | 1,504.00 |
| 94. | ಶ್ರೀ ಬಿ.ಪಿ. ಸೋಮಣ್ಣ, ಹಾಸನ | 2,111.00 | 128. | ಶ್ರೀ ಎ. ಕಾಳಾಚಾರ್, ಉಜ್ಜನಿ | 1,001.00 |
| 95. | ಶ್ರೀ ಮಲ್ಲೇಶಯ್ಯ, ಕುದುರಗೆರೆ | 2,101.00 | 129. | ಶ್ರೀ ಎಲ್. ಮಲ್ಲಿಕಾರ್ಜುನಯ್ಯ, ತುಮಕೂರು | 1,500.00 |

-ಮುಂದುವರೆಯುತ್ತದೆ



ಸ್ಥಾಪನೆ : 1995

ಶುಭಾಶಯಗಳೊಂದಿಗೆ

ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ

ದೂರವಾಣಿ : 2277267

ಫ್ಯಾಕ್ಸ್ : 2277267



**ಸಿದ್ಧ ಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,**

ಬಿ.ಹೆಚ್.ರಸ್ತೆ, ತುಮಕೂರು-572 102

**ಪ್ರಗತಿ ನೋಟ ( 31-3-2013 ರಲ್ಲಿದ್ದಂತೆ) ಮತ್ತು ಠೇವಣಿಗಳು** (ಲಕ್ಷ ರೂ.ಗಳಲ್ಲಿ)

| | | | |
|---|---|---|---|
| ಸದಸ್ಯರ ಸಂಖ್ಯೆ | 4005 | ಸಾಲಗಳು | 6005.63 |
| ಪಾವತಿಯಾದ ಷೇರು ಬಂಡವಾಳ | 288.05 | ಹೂಡಿಕೆಗಳು | 2459.78 |
| ಆಪದ್ಧನ ಮತ್ತು ನಿಧಿಗಳು | 578.88 | ದುಡಿಯುವ ಬಂಡವಾಳ | 8826.30 |
| ಠೇವಣಿಗಳು | 7959.37 | ನಿವ್ವಳ ಲಾಭ (ತೆರಿಗೆ ನಂತರ) | 115.28 |

**ಠೇವಣಿ ಮೇಲಿನ ಬಡ್ಡಿ ದರಗಳು**

46 ದಿವಸಗಳಿಂದ 90 ದಿವಸಗಳವರೆಗೆ - ಶೇ. 6
91 ದಿವಸಗಳಿಂದ 180 ದಿವಸಗಳವರೆಗೆ - ಶೇ. 8
181 ದಿವಸಗಳಿಂದ 365 ದಿವಸಗಳವರೆಗೆ - ಶೇ. 9
1 ವರ್ಷ ಮೇಲ್ಪಟ್ಟು 2 ವರ್ಷದವರೆಗೆ - ಶೇ. 10
2 ವರ್ಷ ಮೇಲ್ಪಟ್ಟು 3 ವರ್ಷದವರೆಗೆ - ಶೇ. 11
3 ವರ್ಷ ಮೇಲ್ಪಟ್ಟು - ಶೇ. 9

ಹಿರಿಯ ನಾಗರಿಕರಿಗೆ,
ಒಂದು ವರ್ಷ ಮೇಲ್ಪಟ್ಟ ಠೇವಣಿಗಳ ಮೇಲೆ ½% ಅಧಿಕ ಬಡ್ಡಿ ದರವನ್ನು ಅವರ ಠೇವಣಿಗಳ ಮೇಲೆ ನೀಡಲಾಗುವುದು.
ಒಂದು ಲಕ್ಷದವರೆಗಿನ ಠೇವಣಿಗಳ ವಿಮಾ ರಕ್ಷಣೆ ಇದೆ. (ಡಿ.ಐ.ಸಿ.ಜಿ.ಸಿ.)
ಜಂಟಿಸಾಲ, ಗೃಹನಿರ್ಮಾಣ ಸಾಲ, ಆಸ್ತಿ ಅಡಮಾನ ಸಾಲ, ಹೊಸ /ಹಳೆಯ ವಾಹನಾಧಾರ ಸಾಲ, ಯಂತ್ರೋಪಕರಣ ಸಾಲ,
ವಸ್ತು ಬಳಕೆದಾರರ ಸಾಲ, ಮೀರಳೆತ, ವೇತನಾಧಾರ, ಚಿನ್ನಾಭರಣ ಸಾಲಗಳಿಗೆ ಬಡ್ಡಿದರ ಶೇ. 13 ರಿಂದ 15

**ನೂತನ ಶಾಖೆಗಳು :**

ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ಸಿದ್ಧಗಂಗಾ ಕಾಲೇಜ್ ಕ್ಯಾಂಪಸ್, ಗಾಂಧಿನಗರ
ಬಿ.ಹೆಚ್. ರಸ್ತೆ, ತುಮಕೂರು
ಫೋನ್ : 0816-2277273

ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ಹಾಸ್ಪಿಟಲ್ ರಸ್ತೆ, ದಾಬಸಪೇಟೆ (ಸೋಂಪುರ)
ನೆಲಮಂಗಲ ತಾ॥, ಬೆಂಗಳೂರು ಗ್ರಾಮಾಂತರ ಜಿಲ್ಲೆ
ಫೋನ್ : 080-7735409

ಶ್ರೀ ಟಿ.ಕೆ. ನಂಜುಂಡಪ್ಪ
ಅಧ್ಯಕ್ಷರು

ಶ್ರೀ ಕೆ.ಎಸ್. ಶಂಕರಯ್ಯ
ಉಪಾಧ್ಯಕ್ಷರು

ನಿರ್ದೇಶಕರು
ಶ್ರೀ ಎಂ.ಪಿ. ಸದಾಶಿವಯ್ಯ
ಶ್ರೀ ಹೆಚ್.ಡಿ. ಸೋಮಶೇಖರಯ್ಯ
ಶ್ರೀ ಮಹೇಶಪ್ಪ
ಡಾ. ಆರ್.ಸಿ. ಪುಟ್ಟಬುದ್ಧಿ
ಡಾ. ಎಸ್. ಪರಮೇಶ್
ಶ್ರೀ ಎಸ್. ವಿಶ್ವನಾಥಯ್ಯ
ಶ್ರೀ ಎಸ್. ವಿಶ್ವನಾಥ್
ಶ್ರೀ ಬಿ.ಎಸ್. ರುದ್ರೇಶಯ್ಯ
ಶ್ರೀ ಕೆ.ಎಂ. ಸ್ವಾಮಿ
ಶ್ರೀ ರಮೇಶ್
ಶ್ರೀಮತಿ ಲೀಲಾಂಬಿಕ

ಶ್ರೀ ಹೆಚ್.ಕೆ. ಶಿವಪ್ರಕಾಶ್
ವ್ಯವಸ್ಥಾಪಕರು

RNI No. 17139/69 "Siddaganga" Monthly - Postal Reg. No. L2/RNP/385/TMR/2012-14



ಬೆಂಗಳೂರು ಉತ್ತರ ತಾ. ದಾಸನಪುರ ಹೋ. ದೊಂಬರಹಳ್ಳಿಯ ದಿ. ಮುದ್ದಹನುಮಯ್ಯನವರ ಮಕ್ಕಳು ಶ್ರೀ ಡಿ.ಎಂ. ಹನುಮಂತಪ್ಪ, ಶ್ರೀ ಡಿ.ಎಂ. ರಾಮಾಂಜನೇಯರವರು ಮಾದನಾಯಕನಹಳ್ಳಿಯಲ್ಲಿ ನೂತನವಾಗಿ ಸ್ಥಾಪಿಸಿರುವ ಶ್ರೀ ರಾಮಾಂಜನೇಯ ಪೆಟ್ರೋಲ್ ಬಂಕ್‌ನ್ನು ಪೂಜ್ಯ ಶ್ರೀಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಲಕ್ಷ್ಮೀಪುರದ ಶ್ರೀ ಬಸವರಾಜಪ್ಪ ಉಪಸ್ಥಿತರಿದ್ದರು.



ಸಿದ್ಧಗಂಗಾ ಪದವಿಪೂರ್ವ ಕಾಲೇಜಿನ ಪ್ರತಿಭಾ ಕಾರಂಜಿ ಕಾರ್ಯಕ್ರಮವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಕಾಲೇಜಿನ ಆಡಳಿತ ವರ್ಗದವರು ಹಾಜರಿದ್ದರು.



ತುಮಕೂರಿನ ಎಸ್.ಎಸ್. ಪುರಂನಲ್ಲಿ ವಾಸನ ಕಣ್ಣಿನ ಆಸ್ಪತ್ರೆಯನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಆಸ್ಪತ್ರೆಯ ಆಡಳಿತ ಮಂಡಳಿ ಹಾಗೂ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.



ತುಮಕೂರಿನ ಶಿರಾಗೇಟ್‌ನಲ್ಲಿ ನೂತನವಾಗಿ ನಿರ್ಮಿಸಿಲಾಗಿರುವ ಹೆಚ್.ಕೆ.ಎಸ್. ಕಲ್ಯಾಣ ಮಂಟಪವನ್ನು ಡಿಸೆಂಬರ್ 8 ರಂದು ಪರಮಪೂಜ್ಯ ಶ್ರೀ ಶ್ರೀಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಮಾಲೀಕರಾದ ಡಾ. ಹಸೀಬ್ ಆಲಿ ಹಾಗೂ ಕುಟುಂಬ ವರ್ಗದವರು ಹಾಜರಿದ್ದರು.



ಡಿಸೆಂಬರ್ 6, 2013 ರಂದು ತುಮಕೂರು ಎಂ.ಜಿ. ರಸ್ತೆಯಲ್ಲಿ ಸಿದ್ಧರಾಮೇಶ್ವರ ಚಿಟ್ಸ್ ಪ್ರೈ. ಲಿ. ಸಂಸ್ಥೆಯನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಲೋಕಾರ್ಪಣೆ ಮಾಡಿದರು. ಶ್ರೀ ಸಿ.ಎಸ್. ಮೋಹನ್‌ಕುಮಾರ್, ಶ್ರೀ ಬಿ.ಇ. ಕೀರ್ತಿಶೇಖರ್ ಮೊದಲಾದವರು ಉಪಸ್ಥಿತರಿದ್ದರು.



ಡಿಸೆಂಬರ್ 22 ರಂದು ಶ್ರೀಮಠದಲ್ಲಿ ಶ್ರೀ ಕೆ. ಜಗದೀಶ್ ಅವರು ಬರೆದ 'ಶರಣಜ್ಯೋತಿ ಶ್ರೀ ಗುರುಚರಣ' ಕೃತಿಯನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಉಪಸ್ಥಿತಿಯಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ಬಿಡುಗಡೆ ಮಾಡಿದರು.

Cover printed at : Geetanjali Graphics, B-71, KSSIDC Ind. Area, 6th Block, Rajajinagar, Bengaluru-10. Ph : 23404232